# ನೀತಿ

## ದೇವರನಾಮ

**ಅರಿಯರು ಮನುಜರರಿಯರು** **ರಾಗ : ಶುಭಪಂತುರಾವಳಿ, ಆದಿತಾಳ**

ಅರಿಯರು ಮನುಜರರಿಯರು॥ಪ॥ ಅರಿಯರು ಮನುಜರು ಅರಿತೂ ಅರಿಯರು। ಧರೆ ಈರೇಳಕ್ಕೆ ಹರಿಯಲ್ಲದಿಲ್ಲವೆಂದು॥ಅ॥ ನಾರದಮುನಿ ಬಲ್ಲ ವಾರಿಜೋದ್ಭವ ಬಲ್ಲ। ಪಾರಾಶರ ಬಲ್ಲ ಮನು ಬಲ್ಲನು॥ ಧೀರ ಭೀಷ್ಮನು ಬಲ್ಲ ಪಾರ್ವತಿ ಬಲ್ಲಳು। ಕಾರುಣೀಕನು ಶ್ರೀಹರಿಯಲ್ಲದಿಲ್ಲವೆಂದು॥1॥ ಶಿವಬಲ್ಲ ಧ್ರುವ ಬಲ್ಲ ದ್ರೌಪದಿ ಬಲ್ಲಳು। ಅವನಿಪಾಲಕ ಜನಕ ನೃಪ ಬಲ್ಲನು॥ ಯುವತಿಗೆ ಶಾಪವಿತ್ತ ಗೌತಮಮುನಿ ಬಲ್ಲ। ಭವರೋಗವೈದ್ಯ ಶ್ರೀಹರಿಯಲ್ಲದಿಲ್ಲವೆಂದು॥2॥ ದಿಟ್ಟ ಪ್ರಹ್ಲಾದ ಬಲ್ಲ ಕೆಟ್ಟ ಅಜಮಿಳ ಬಲ್ಲ। ಸಿಟ್ಟಿನಿಂದಲಿ ಒದ್ದ ಭೃಗು ಬಲ್ಲನು॥ ಕೊಟ್ಟ ಬಲಿ ಬಲ್ಲ ಮೊರೆಯಿಟ್ಟ ಗಜೇಂದ್ರ ಬಲ್ಲ। ಸೃಷ್ಟೀಶ ಪುರಂದರವಿಠಲನೆ ದೈವವೆಂದು॥3॥

**ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ** **ರಾಗ: ಅಠಾಣ, ಝಂಪೇತಾಳ**

ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ। ಸುಜ್ಞಾನಿಗಳ ಕೂಡೆ ಜಗಳವೇ ಲೇಸು॥ಪ॥ ಉಂಬುಡುವುದಕ್ಕಿರುವ ಅರಸನೋಲಗಕಿಂತ। ತುಂಬಿದೂರೊಳಗೆ ತಿರಿದುಂಬುವುದೇ ಲೇಸು॥ ಹಂಬಲಿಸಿ ಹಾಳು ಹರಟೆ ಹೊಡೆವುದಕಿಂತ। ನಂಬಿ ಹರಿದಾಸರೊಳು ಪೊಂದಿಪಾಡುವುದೇ ಲೇಸು॥1॥ ಒಡನೆ ಹಂಗಿಸುವವನ ಪಾಲೋಗರಕ್ಕಿಂತ। ಕುಡಿನೀರು ಕುಡಿದುಕೊಂಡಿಹುದೇ ಲೇಸು॥ ಬಿಡದೆ ಬಡಿದಾಡುವರ ನೆರೆಯಲಿಹುದಕ್ಕಿಂತ। ಅಡವಿಯೊಳಗಜ್ಞಾತವಾಸವೇ ಲೇಸು॥2॥ ಮಸೆದು ಮತ್ಸರಿಪ ಸತಿಯೊಡನೆ ಸಂಸಾರಕ್ಕಿಂತ। ಹಸನಾದ ಹಾಳುಗುಡಿಯೇ ಲೇಸು॥ ಬಿಸಜಾಕ್ಷ ಪುರಂದರವಿಠಲನ್ನ ನೆನೆನೆನೆದು। ವಸುಧೆಯೊಳು ಚಿರಕಾಲವಿರುವುದೆ ಲೇಸು॥3॥

**ಅಲ್ಲಿದೆ ನಮ್ಮ ಮನೆ ಇಲ್ಲಿ ಬಂದೆ** **ರಾಗ: ಪೂರ್ವಿಕಲ್ಯಾಣಿ, ಆದಿತಾಳ**

ಅಲ್ಲಿದೆ ನಮ್ಮ ಮನೆ, ಇಲ್ಲಿ ಬಂದೆ ಸುಮ್ಮನೆ॥ಪ॥ ಕದಬಾಗಿಲಿರಿಸಿಹ ಕಳ್ಳಮನೆಯಿದು। ಮುದದಿಂದಲೋಲ್ಯಾಡೊ ಸುಳ್ಳು ಮನೆ॥ ಇದಿರಾಗಿ ವೈಕುಂಠ ವಾಸ ಮಾಡುವಂಥ। ಪದುಮನಾಭನ ದಿವ್ಯ ಬದುಕು ಮನೆ॥1॥ ಮಾಳಿಗೆ ಮನೆಯೆಂದು ನೆಚ್ಚಿ ಕೆಡಲುಬೇಡ। ಕೇಳಯ್ಯ ಹರಿಕಥೆ ಶ್ರವಣಂಗಳ॥ ನಾಳೆ ಯಮದೂತರು ಬಂದೆಳೆದೊಯ್ವಾಗ। ಮಾಳಿಗೆ ಮನೆ ಸಂಗಡ ಬಾರದಯ್ಯ॥2॥ ಮಡದಿ ಮಕ್ಕಳೆಂಬ ಹಂಬಲ ನಿನಗೇಕೊ। ಕಡುಗೊಬ್ಬುತನದಲಿ ನಡೆಯದಿರು। ಒಡೆಯ ಶ್ರೀ ಪುರಂದರವಿಠಲನ ಚರಣವ। ದೃಢ ಭಕ್ತಿಯಲಿ ನೀ ಭಜಿಸಿಕೊ ಮನುಜ॥3॥

**ಅನುಭವದಡುಗೆಯ ಮಾಡಿ** **ರಾಗ: ನಾದನಾಮಕ್ರಿಯೆ, ಆದಿತಾಳ**

ಅನುಭವದಡುಗೆಯ ಮಾಡಿ ಅದಕ್ಕನುಭವಿಗಳು ಬಂದು ನೀವೆಲ್ಲ ಕೂಡಿ॥ಪ॥ ತನುವೆಂಬ ಭಾಂಡವ ತೊಳೆದು। ಕೆಟ್ಟ। ಮನದ ಚಂಚಲವೆಂಬ ಮುಸುರೆಯ ಕಳೆದು॥ ಘನವಾಗಿ ಮನೆಯನ್ನು ಬಳಿದು ಅಲ್ಲಿ। ಮಿನುಗುವ ತ್ರಿಗುಣದ ಒಲೆಗುಂಡನೆಡೆದು॥1॥ ವಿರಕ್ತಿಯೆಂಬುವ ಮಡಿಯುಟ್ಟು ಪೂರ್ಣ। ಹರಿಭಕ್ತಿಯೆಂಬ ನೀರನ್ನೆಸರಿಟ್ಟು॥ ಅರಿವೆಂಬ ಬೆಂಕಿಯಕೊಟ್ಟು। ಮಾಯಾ। ಮರವೆಂಬ ಕಾಷ್ಠವ ಮುದದಿಂದ ಸುಟ್ಟು॥2॥ ಶರಣೆಂಬೊ ಸಾಮಗ್ರಿ ಹೂಡಿ। ಮೋಕ್ಷ ಪರಿಕರವಾದಂಥ ಪಾಕವ ಮಾಡಿ॥ ಗುರು ಶರಣರು ಸವಿದಾಡಿ ನಮ್ಮ। ಪುರಂದರವಿಠಲನ ಬಿಡದೆ ಕೊಂಡಾಡಿ॥3॥

**ಆಚಾರವಿಲ್ಲದ ನಾಲಿಗೆ** **ರಾಗ: ಚಾರುಕೇಶಿ, ಆದಿತಾಳ**

ಆಚಾರವಿಲ್ಲದ ನಾಲಿಗೆ ನಿನ್ನ। ನೀಚ ಬುದ್ಧಿಯ ಬಿಡು ನಾಲಿಗೆ॥ಪ॥ ವಿಚಾರವಿಲ್ಲದೆ ಪರರ ದೂಷಿಪುದಕ್ಕೆ। ಚಾಚಿಕೊಂಡಿರುವಂಥ ನಾಲಿಗೆ॥ಅ॥ ಪ್ರಾತಃಕಾಲದೊಳೆದ್ದು ನಾಲಿಗೆ। ಸಿರಿಪತಿಯೆನ್ನಬಾರದೆ ನಾಲಿಗೆ। ಪತಿತ ಪಾವನ

ನಮ್ಮ ರತಿಪತಿ ಜನಕನ। ಸತತವು ನುಡಿ ಕಂಡ್ಯ ನಾಲಿಗೆ॥1॥ ಚಾಡಿ ಹೇಳಲಿಬೇಡ ನಾಲಿಗೆ। ನಿನ್ನ ಬೇಡಿಕೊಂಬುವೆನು ನಾಲಿಗೆ॥ ರೂಢಿಗೊಡೆಯ ಶ್ರೀ ರಾಮನ ನಾಮವ। ಪಾಡುತಲಿರು ಕಂಡ್ಯ ನಾಲಿಗೆ॥2॥ ಹರಿಯ ಸ್ಮರಣೆ ಮಾಡು ನಾಲಿಗೆ। ನರಹರಿಯ ಭಜಿಸು ಕಂಡ್ಯ ನಾಲಿಗೆ॥ ವರದ ಪುರಂದರವಿಠ್ಠಲರಾಯನ। ಚರಣಕಮಲವ ನೆನೆ ನಾಲಿಗೆ॥3॥

### ಆರು ಹಿತವರು ನಿನಗೆ — ರಾಗ: ಮಾಯಾಮಾಳವಗೌಳ, ಝಂಪೆತಾಳ

ಆರು ಹಿತವರು ನಿನಗೆ ಮೂರು ಮಂದಿಯೊಳಗೆ॥ಪ॥ ನಾರಿಯೋ, ಧಾರುಣಿಯೋ ಬಲು ಧನದ ಸಿರಿಯೋ॥ಅ.ಪ.॥ ಅನ್ಯರಲಿ ಜನಿಸಿರ್ದ ಅಂಗನೆಯ ಕರೆತಂದು। ತನ್ನ ಮನೆಗವಳ ಯಜಮಾನಿಎನಿಸಿ॥ ಭಿನ್ನವಿಲ್ಲದೆ ಅರ್ಧದೇಹವೆನಿಸುವ ಸತಿಯು। ಕಣ್ಣಿನಲಿ ನೋಡಲಮ್ಮಳು ಕಾಲವಶದಿ॥1॥ ಮುನ್ನ ಶತಕೋಟಿ ರಾಯರುಗಳಾಳಿದ ನೆಲನ। ತನ್ನದೆಂದೆನುತ ಶಾಸನವ ಬರೆಸಿ॥ ಬಿನ್ನಣದ ಮನೆಕಟ್ಟಿ ಕೋಟೆ ಕೊತ್ತಳವಿಕ್ಕಿ। ಚೆನ್ನಿಗನು ಅಸುವಳಿಯೆ ಹೊರಗೆ ಹಾಕುವರು॥2॥ ಉದ್ಯೋಗ ವ್ಯವಹಾರ ನೃಪಸೇವೆ ಕುಶಲಗತಿ। ಕ್ಷುದ್ರತನ ಕಳವು ಪರದ್ರೋಹದಿಂದ॥ ಬುದ್ಧಿಯಿಂದಲಿ ಗಳಿಸಿ ಇಟ್ಟಿದ್ದ ಅರ್ಥವನು। ಸದ್ಯದಲಿ ಆರುಂಬುವರು ಪೇಳೊ ಮನುಜ॥3॥ ಶೋಕವನು ಗೈಯ್ಯುವರು ಸತಿಸುತರು ಬಾಂಧವರು। ಜೋಕೆ ತಪ್ಪಿದ ಬಳಿಕ ಅರ್ಥ ವ್ಯರ್ಥ॥ ಲೋಕದೊಳು ಗಳಿಸಿರ್ದ ಪುಣ್ಯ ಪಾಪಗಳೆರಡು। ಸಾಕಾರವಾಗಿ ಸಂಗಡ ಬಾಹೊವಲ್ಲದೆ॥4॥ ಅಸ್ಥಿರದ ದೇಹವನು ನೆಚ್ಚಿ ನೀ ಕೆಡಬೇಡ। ಸ್ವಸ್ಥದಲಿ ನೆನೆ ಕಂಡ್ಯ ಪರಮಾತ್ಮನ॥ ಚಿತ್ತದೊಳು ಶುದ್ಧಿಯಿಂ ಪುರಂದರವಿಠಲನೆ। ಉತ್ತಮೋತ್ತಮನೆಂದು ಸುಖಿಯಾಗೊ ಮನುಜ॥5॥

### ಆರೂ ಸಂಗಡ ಬಾಹೋರಿಲ್ಲ — ರಾಗ:ಶಿವರಂಜನಿ

ಆರೂ ಸಂಗಡ ಬಾಹೋರಿಲ್ಲ। ನಾರಾಯಣ ನಾಮ॥ ನೆರೆಬಾಹೋದಲ್ಲದೆ॥ಪ॥ ಹೊತ್ತು ನವಮಾಸ ಪರ್ಯಂತ ಗರ್ಭದಲ್ಲಿ। ಅತ್ಯಂತ ನೋವು ಬೇನೆಗಳಿಂದ॥ ತುತ್ತು ವಸ್ತ್ರವನಿಕ್ಕಿ ಸಲಹಿದ ತಾಯ್ತಂದೆ। ಹೊತ್ತುಗಳೆವರಲ್ಲದೆ ಬೆನ್ಹತ್ತಿ ಬಹರೇ॥1॥ ಗುರು ಬಂಧು ಬುಧ ಜನರು ನಿಂತಗ್ನಿ ಸಾಕ್ಷ್ಯಾಗಿ। ಕರವಿಡಿದು ಧಾರೆಯನೆರೆದುಕೊಂಡು। ತರುಣಿ ಇನಿಯನ ಹರಣ ಹೋಗಲು ತಾ ಕಂಡು। ಬರುವುದಕ್ಕಂಜಿ ಆರುಗತಿ ಎಂಬುವಳು॥2॥ ಮನೆ ಮಕ್ಕಳು ತಮ್ಮ ಧನಕೆ ಬಡಿದಾಡುವರು। ಧನಕಾಗಿ ನಿನ್ನನ್ನೇ ನಂಬಿದವರು। ಅನುಮಾನವೇಕೆ ಜೀವನ ತೊಲಗಿದಾಕ್ಷಣದಿ। ಮುನ್ನೊಂದು ಅರಗಳಿಗೆ ನಿಲ್ಲಗೊಡರು॥3॥ ಸುತ್ತಲು ಕುಳ್ಳಿರ್ದ ಮಿತ್ರ ಬಾಂಧವರೆಲ್ಲ। ಹೊತ್ತು ಹೋದಿತು ಹೊರಗೆ ಹಾಕಿಸುವರು। ಹಿತ್ತಲಾ ಕಸಕ್ಕಿಂತ ಅತ್ತತ್ತ ಈ ದೇಹ। ಹೊತ್ತುಕೊಂಡೊಯ್ದು ಅಗ್ನಿಯೊಳ ಬಿಸುಡುವರು॥4॥ ಹರಣ ಹಿಂಗದ ಮುನ್ನ ಹರಿಯ ಸೇವೆಯ ಮಾಡಿ। ಪರಗತಿಗೆ ಸಾಧನವ ಮಾಡಿಕೊಳ್ಳೋ। ಕರುಣ ನಿಧಿ ಕಾಗಿನೆಲೆ ಆದಿ ಕೇಶವನ। ನಿರುತದಿ ನೆನೆನೆನೆದು ಸುಖಿಯಾಗೋ ಮರುಳೆ॥5॥

### ಈಸಬೇಕು ಇದ್ದು ಜಯಿಸಬೇಕು — ರಾಗ: ಅಮೃತವರ್ಷಿಣಿ, ಆದಿತಾಳ

ಈಸಬೇಕು ಇದ್ದು ಜಯಿಸಬೇಕು॥ಪ॥ ಹೇಸಿಗೆ ಸಂಸಾರದಲ್ಲಿ ಆಸೆ ಲೇಶ ಇಡದ ಹಾಗೆ॥ಅ॥ ತಾಮರಸ ಜಲದಂತೆ। ಪ್ರೇಮವಿಟ್ಟು ಭವದೊಳು॥ ಸ್ವಾಮಿ ರಾಮ ಎನುತ ಪಾಡಿ। ಕಾಮಿತ ಕೈ ಗೊಂಬರೆಲ್ಲ॥1॥ ಗೇರು ಹಣ್ಣಿನಲ್ಲಿ ಬೀಜ। ಸೇರಿದಂತೆ ಸಂಸಾರದಿ॥ ಮೀರಿ ಆಸೆ ಮಾಡದಂತೆ॥ ಧೀರಕೃಷ್ಣನ ಭಕುತರೆಲ್ಲ॥2॥ ಮಾಂಸದಾಸೆಗೆ ಮತ್ಸ್ಯ ಸಿಲುಕಿ। ಹಿಂಸೆ ಪಟ್ಟ ಪರಿಯಂತೆ॥ ಮೋಸ ಹೋಗದಹಾಗೆ। ಜಗದೀಶ ಪುರಂದರವಿಠಲನ ನೆನೆದು॥3॥

### ಊರ ದೇವರ ಮಾಡಬೇಕಣ್ಣ — ರಾಗ: ಯಮನ್‌ಕಲ್ಯಾಣಿ, ಆದಿತಾಳ

ಊರ ದೇವರ ಮಾಡಬೇಕಣ್ಣ ತನ್ನೊಳಗೆ ತಾನೆ॥ಪ॥ ಊರ ದೇವರ ಮಾಡಿರೆಂದು ಸಾರುತಿದೆ ಶ್ರುತಿ ಇರುಳು ಹಗಲು। ದ್ವಾರಗಳೊಂಭತ್ತು ಮುಚ್ಚಿ ನಿಲ್ಲಿಸಿ ಭ್ರೂಮಧ್ಯದಲ್ಲಿ॥ಅ.ಪ.॥ ಎಷ್ಟು ಯುಗಗಳು ತೀರಿಹೋಯ್ತಣ್ಣ ದೇವರ ಮಾಡದೆ। ಕಷ್ಟದಿಂದ ನೊಂದೆ ಕಾಣಣ್ಣ॥ ಅಷ್ಟ ದಳದ ಕಂಭ ನಿಲ್ಲಿಸಿ ಕಟ್ಟಿ ಚಕ್ರಂಗಳನು ಹಾಕಿ। ಸೃಷ್ಟಿದೇವರ ತಂದು ನಿಲ್ಲಿಸಿ

ದುಷ್ಟಕೋಣನ ಶಿರವ ತರಿದು॥1॥ ಕಷ್ಟತರ್ಕವೆಂಬ ಕುರಿಯಣ್ಣ ಅದನ್ನು ತಂದು। ಕಟ್ಟಿ ತಲೆಯನು ಹೊಡೆಯಬೇಕಣ್ಣ॥ ಅಷ್ಟಮದದ ಕುರಿಗಳನ್ನು ಕಟ್ಟಿ ತಲೆಯನು ಚಂಡನಾಡಿ। ಅಟ್ಟಿ ತಿರುಗುವ ಕೋಳಿಯನ್ನು ಕುಟ್ಟಿ ಸೂರೆ ಹಾಕುತಲ್ಲಿ॥2॥ ನಾನು ಎಂಬುವ ಮೇಕೆ ಹೋತಣ್ಣ ಅದಕ್ಕೆ ತಕ್ಕ। ಜ್ಞಾನವೆಂಬುವ ಪೋತರಾಜಣ್ಣ॥ ಮಾನವೆಂಬ ಭಾಟಿ ಹೊಡೆದು ಹೀನ ಹೋತನ ಸೀಳಿ ಬಿಸುಟು। ಧ್ಯಾನ ಗುಡಿಸಲು ಸೂರೆಗೊಂಡು ತಾನೆ ಬೆಳಗುವ ಜ್ಯೋತಿ ನಿಲ್ಲಿಸಿ॥3॥ ನಾಳೆ ನೋಡೋಣೆನ್ನಬೇಡಣ್ಣ ಕೇಳಣ್ಣ ನಿನ್ನ। ಬಾಳು ಅಸ್ಥಿರವೆಂದು ತಿಳಿಯಣ್ಣ॥ ಪಾಳ್ಯಗಾರನಂತೆ ಬಹನು ಬಾಳುವ ಕಾಲದಿ ಯಮನು। ಕೋಳಿ ಪಿಳ್ಳೆಯಾಡುವಾಗ ಹಾಳೆಹದ್ದು ಒಯ್ಯುವಂತೆ॥4॥ ಹೆಂಡಿರು ಮಕ್ಕಳು ಸುಳ್ಳು ಕೇಳಣ್ಣ। ನಿನ್ನ ಮಂಡೆ ತುಂಬ ಬಳಗ ಕಾಣಣ್ಣ॥ ದಂಡಧಾರಿ ಯಮನು ಬಂದು ಮಂಡೆಮೇಲೆ ಹೊಯ್ಯುವಾಗ। ಹೆಂಡಿರು ಮಕ್ಕಳು ನಿನ್ನ ಕಂಡು ಭಂಗಬಿಡಿಸಬಲ್ಲರೇನಣ್ಣ॥5॥ ಸತ್ತ ಪೆಣವ ನೋಡುವಿಯಲ್ಲೊ ನೀ ಗಳಿಸಿದಂಥ। ಬುತ್ತಿ ನೋಡಿ ಉಬ್ಬುವಿಯಲ್ಲೊ॥ ಮೃತ್ಯುವಿನ ಬಾಯಿಯೊಳಗೆ ತುತ್ತು ಆಗಿ ಹೋಗಬೇಡ। ತೊತ್ತು ಆಗಿ ಗುರುವಿಗೆ ನೀ ಹತ್ತಿ ನೋಡೋ ಗುಡ್ಡವನು॥6॥ ಮುಂದೆ ಇಂಥ ಜನ್ಮ ಬರದಣ್ಣ, ನೋಡಣ್ಣ ನಿನಗೆ। ಮಂದಮತಿಯು ಬೇಡ ಕಾಣಣ್ಣ॥ ಹಿಂದಿನ ಕಷ್ಟವ ಮರೆದು ಮುಂದಿನ ಹಮ್ಮನು ತೊರೆದು। ತಂದೆ ಪುರಂದರವಿಠ್ಠಲನ್ನ ಹೊಂದಲು ನೀ ಮುಕ್ತನಣ್ಣ॥7॥

## ಎಲ್ಲಾನು ಬಲ್ಲೆನೆಂಬುವರಿಲ್ಲ — ರಾಗ: ಮಧ್ಯಮಾವತಿ, ಆದಿತಾಳ

ಎಲ್ಲಾನು ಬಲ್ಲೆನೆಂಬುವರಿಲ್ಲ, ಅವಗುಣ ಬಿಡಲಿಲ್ಲ॥ಪ॥ ಸೊಲ್ಲಿಗೆ ಶರಣರ ಕಥೆಗಳ ಪೇಳುತ। ಅಲ್ಲದ ನುಡಿಯನು ನುಡಿಯುವಿರಲ್ಲ॥ಅ॥ ಕಾವಿಯನುಟ್ಟು ತಿರುಗುವಿರಲ್ಲ ಕಾಮವ ಬಿಡಲಿಲ್ಲ। ನೇಮನಿಷ್ಠೆಗಳ ಮಾಡುವಿರಲ್ಲ ತಾಮಸ ಬಿಡಲಿಲ್ಲ॥ ತಾವೊಂದರಿಯದೆ ಆಗಮ ತಿಳಿಯದೆ। ಶ್ವಾನನ ಕುಳಿಯಲಿ ಬೀಳುವಿರಲ್ಲ॥1॥ ಗುರುಗಳ ಸೇವೆ ಮಾಡಿದಿರಲ್ಲ ಗುರುತಾಗಲಿಲ್ಲ। ಪರಿಪರಿ ದೇಶವ ತಿರುಗಿದಿರಲ್ಲ ಪೊರೆಯುವರಿನ್ನಿಲ್ಲ॥ ಅರಿವೊಂದರಿಯದೆ ಆಗಮ ತಿಳಿಯದೆ। ನರಕ ಕೂಪದಲ್ಲಿ ಬೀಳುವಿರಲ್ಲ॥2॥ ಬ್ರಹ್ಮಜ್ಞಾನಿಗಳು ಎನಿಸುವಿರಲ್ಲ ಹಮ್ಮು ಬಿಡಲಿಲ್ಲ। ಸುಮ್ಮನೆ ಯಾಗವ ಮಾಡುವಿರಲ್ಲ ಸುಳ್ಳನು ಬಿಡಲಿಲ್ಲ॥ ಗಮ್ಮನೆ ಪುರಂದರವಿಠಲನ ಪಾದಕೆ। ಹೆಮ್ಮೆ ಬಿಟ್ಟು ನೀವೆರಗಲೆ ಇಲ್ಲ॥3॥

## ಕರ್ಮಸಿದ್ಧಾಂತದಂತೆ ಜೀವನವೆಲ್ಲವು — ರಾಗ: ಶುದ್ಧಬಂಗಾಳ

ಕರ್ಮಸಿದ್ಧಾಂತದಂತೆ ಜೀವನವೆಲ್ಲವು। ಸುಖದುಃಖಭೋಗವು ಅನಿವಾರ್ಯವು॥ಪ॥ ಹಿಂದಿನ ಜನುಮದಿ ಗಳಿಸಿದ ಫಲವನು। ಇಂದಿನ ಜನುಮದಿ ಭೋಗಿಸೆತಪ್ಪದು। ನಾವು ಮಾಡಿದ ಕರ್ಮಫಲದಿಂದಾಗಿಯೇ। ಮನುಜರಲಿ ಭೇದಸಹಜವಲ್ಲವೆ॥1॥ ತೋಟದ ಗಿಡಗಳು ಬಗೆಬಗೆಯಾಗಿರೆ। ಬಗೆ ಬಗೆ ಫಲಗಳು ಸಿಗುವುದು ತಾನೆ। ಸಿಹಿ ಕಹಿ ಹುಳಿ ವೃಕ್ಷದ ಧರ್ಮವು। ಒಂದೇ ತರದಲಿ ಪೋಷಿಸಿದಾಗ್ಯೂ॥2॥ ಸತ್ಕರ್ಮಮಾಡುತ ಪುಣ್ಯವ ಗಳಿಸಿರಿ। ಸಂಚಿತ ಪುಣ್ಯದಿ ಆನಂದ ಹೊಂದಿರಿ। ಪರಮಾತ್ಮನ ಸಂಗ ಬಿಡದೆ ಭಜಿಸಿರಿ। ಚೈತನ್ಯದಾಸನಿಗೆ ಶುಭವ ಕೋರಿರಿ॥3॥

## ಕಷ್ಟಪಟ್ಟರೂ ಇಲ್ಲ ಕಳವಳಿಸಿದರಿಲ್ಲ — ರಾಗ: ಶಿವರಂಜನಿ, ಆದಿತಾಳ

ಕಷ್ಟಪಟ್ಟರೂ ಇಲ್ಲ। ಕಳವಳಿಸಿದರಿಲ್ಲ। ಭ್ರಷ್ಟಮನುಜ ನಿನ್ನ। ಹಣೆಬರಹದಷ್ಟಲ್ಲದೆ॥ಪ॥ ಸಿರಿವಂತನ ಸ್ನೇಹ ಮಾಡಿಕೊಂಡರು ಇಲ್ಲ। ಪರಿಪರಿವಿದ್ಯೆಗಳ ಕಲಿತರಿಲ್ಲ.....। ನರಿಬುದ್ಧಿಯಂದದಲಿ ನಡೆದುಕೊಂಡರು ಇಲ್ಲ। ಅರಿಯದೇ ಹಲವು ಹಂಬಲಿಸಿದರು ಇಲ್ಲ॥1॥ ಕೊಂಡಾಡಿ ಕಾಡಿ ನೀ ಬೇಡಿಕೊಂಡರು ಇಲ್ಲ। ಕಂಡಕಂಡವರಿಗೆ ಕೈಮುಗಿದರಿಲ್ಲ। ಗಂಡುಗತ್ತರಿಯನ್ನು ಕೊರಳಿಗಿಟ್ಟರು ಇಲ್ಲ। ಪ್ರಚಂಡನಾದರೂ ಇಲ್ಲ ಪರಿಹಾಸ್ಯವೆಲ್ಲ॥2॥ ಕಟ್ಟಾಳು ಕಡುಜಾಣನಾಗಿ ಪುಟ್ಟಿದರಿಲ್ಲ। ಬೆಟ್ಟಗಳನು ಕಿತ್ತು ತಂದಿಟ್ಟರಿಲ್ಲ॥ ಸೃಷ್ಟಿಯೊಳು ಕಾಗಿನೆಲೆಯಾದಿಕೇಶವರಾಯ। ಕೊಟ್ಟವರಿಗುಂಟು ಕೊಡದವರಿಗಿಲ್ಲ॥3॥

**ಕಾಳ ಬೆಳದಿಂಗಳು ಈ ಸಂಸಾರ** **ರಾಗ: ಚಕ್ರವಾಕ, ಅಟ್ಟತಾಳ**

ಕಾಳ ಬೆಳದಿಂಗಳು ಈ ಸಂಸಾರ ಕತ್ತಲೆ ಬೆಳದಿಂಗಳು।।ಪ।। ಉಂಟಾದ ಕಾಲಕ್ಕೆ ನೆಂಟರು ಇಷ್ಟರು। ಬಂಟರಾಗಿ ಬಂದು ಬಾಗಿಲ ಕಾಯ್ವರು। ಉಂಟಾದ ದಿನ ತಪ್ಪಿ ಬಡತನ ಬಂದರೆ। ಒಂಟೆಯ ಹಾಗೆ ಕತ್ತ ಮೇಲಕೆತ್ತುವರು।।1।। ಹೆಡಿಗೆ ಭಕ್ಷಕ್ಕೆ ಗಡಿಗೆ ತುಪ್ಪವಿಕ್ಕಿ। ಸಡಗರದಿಂದುಂಬೋ ಸರಿ ನೆಂಟರು। ಸಡಗರ ದಿನ ತಪ್ಪಿ ಬಡತನ ಬಂದರೆ। ಸುಡುನುಡಿಗಳನಾಡಿ ನಡಿನಡಿ ಎಂಬರೋ।।2।। ಉಂಬಾಗ ಉಡುವಾಗ ಕೊಂಬಾಗ ಕೊಡುವಾಗ। ಬೆಂಬಲದಲಿ ನಲಿನಲಿಯುತಿಹರು। ಬೆಂಬಲತನ ತಪ್ಪಿ ಬಡತನ ಬಂದರೆ। ಇಂಬು ನನಗಿಲ್ಲ ನಡೆಯೆಂಬರು।।3।। ಪುಂಡರೀಕಾಕ್ಷ ಪುರುಷೋತ್ತಮ ಹರಿಯು। ಬಂಡಿ ಬೋವನಾದ ಪಾರ್ಥನಿಗೆ। ಭೂಮಂಡಲವಾಳುವ ಹರಿಶ್ಚಂದ್ರರಾಯನು। ಕೊಂಡವ ಕಾಯ್ದನು ಹೊಲೆಯನಾಳಾಗಿ।।4।। ಏರುವ ದಂಡಿಗೆ ನೂರಾರು ಮಂದಿಯು। ಮೂರು ದಿನದ ಭಾಗ್ಯ ಋಣ ಋಣವು। ನೂರಾರು ಸಾವಿರ ದಂಡವ ತೆತ್ತರೆ। ರಂಗವಿಠ್ಠಲನೆ ಸರಿ ಎಂಬೋರಯ್ಯಾ।।5।।

**ಕಾಗದ ಬಂದಿದೆ ನಮ್ಮ** **ರಾಗ: ಕಾಪಿ-ರೂಪಕತಾಳ**

ಕಾಗದ ಬಂದಿದೆ ನಮ್ಮ ಕಮಲನಾಭನದು ಈ।।ಪ।। ಕಾಗದವನ್ನು ಓದಿಕೊಂಡು ಕಾಲವ ಕಳೆಯಿರೋ।।ಅ.ಪ।। ಕಾಮ ಕ್ರೋಧವ ಬಿಡಿರೆಂಬೋ ಕಾಗದಬಂದಿದೆ। ನೇಮನಿಷ್ಠೆಯೊಳಿರಿರೆಂಬೊ ಕಾಗದಬಂದಿದೆ। ತಾಮಸ ಜನರ ಕೂಡದಿರೆಂಬೊ। ಕಾಗದಬಂದಿದೆ। ನಮ್ಮ ಕಾಮನಯ್ಯನು ತಾನೆ ಬರೆದ ಕಾಗದಬಂದಿದೆ।।1।। ಹೆಣ್ಣಿನಾಸೆ ಬಿಡಿರೆಂಬೊ ಕಾಗದಬಂದಿದೆ। ಹೊನ್ನಿನಾಸೆ ಬಿಡಿರೆಂಬೊ ಕಾಗದಬಂದಿದೆ। ಮಣ್ಣಿನಾಸೆ ಬಿಡಿರೆಂಬೊ ಕಾಗದಬಂದಿದೆ।।2।। ಗೆಜ್ಜೆ ಕಾಲ್ಕಟ್ಟಿರೆಂಬೊ।ಕಾಗದಬಂದಿದೆ। ಹೆಜ್ಜೆ ಹೆಜ್ಜೆಗೆ ಹರಿಯೆನ್ನಿರೆಂಬೊ ಕಾಗದಬಂದಿದೆ। ಲಜ್ಜೆ ಬಿಟ್ಟು ಕುಣಿಯಿರೆಂಬೊ ಕಾಗದಬಂದಿದೆ। ನಮ್ಮ ಪುರಂದರವಿಠ್ಠಲ ತಾನೆ ಬರೆದ ಕಾಗದಬಂದಿದೆ।।3।।

**ಕುರುಡು ನಾಯಿ ತಾ ಸಂತೆಗೆ** **ರಾಗ: ಮಾಯಾಮಾಳವಗೌಳ, ಆದಿತಾಳ**

ಕುರುಡು ನಾಯಿ ತಾ ಸಂತೆಗೆ ಬಂತಂತೆ। ಅದು ಏತಕೆ ಬಂತೊ।।ಪ।। ಖಂಡಸಕ್ಕರೆ ಹಿತವಿಲ್ಲ ವಂತೆ। ಖಂಡ ಎಲುಬು ಕಡಿದಿತಂತೆ। ಹೆಂಡಿರ ಮಕ್ಕಳ ನೆಚ್ಚಿತಂತೆ। ಕೊಂಡು ಹೋಗುವಾಗ ಯಾರಿಲ್ಲವಂತೆ।।1।। ಭರದಿ ಅಂಗಡಿ ಹೊಕ್ಕಿತಂತೆ। ತಿರುವಿ ದೊಣ್ಣೆಯಲಿ ಇಕ್ಕಿದರಂತೆ। ಮರೆತರಿನ್ನು ವ್ಯರ್ಥವಂತೆ। ನರಕದೊಳಗೆ ಬಿದ್ದಿತಂತೆ।।2।। ವೇದವಾದಗಳ ನೋದಿತಂತೆ। ಗಾದೆಮಾಡಿಬಿಟ್ಟಿತಂತೆ। ಹಾದಿತಪ್ಪಿ ನಡೆದು ಯಮನ। ಬಾಧೆಗೆ ತಾ ಗುರಿಯಾಯಿತಂತೆ।।3।। ನಾನಾ ಜನ್ಮ ವನೆತ್ತಿತಂತೆ। ಮಾನವನಾಗಿ ಹುಟ್ಟಿತಂತೆ।। ಕಾನನ ಕಾನನ ತಿರುಗಿತಂತೆ। ತಾನು ತನ್ನನೆ ಮರೆಯಿತಂತೆ।।4।। ಮಂಗನ ಕೈಯ ಮಾಣಿಕ್ಯ ದಂತೆ। ಹಾಂಗೂ ಹಿಂಗೂ ಕಳೆದೀತಂತೆ। ರಂಗ ಪುರಂದರವಿಠಲನ ಮರೆತು। ಭಂಗ ಬಹಳ ಪಟ್ಟಿತಂತೆ।।5।।

**ಕುಲ2 ಕುಲವೆಂದು** **ರಾಗ: ಕಾನಡ, ಆದಿತಾಳ**

ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ। ಕುಲದ ನೆಲೆಯನೇನಾದರೂ ಬಲ್ಲಿರಾ।।ಪ।। ಹುಟ್ಟದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ। ಅಟ್ಟು ಉಣ್ಣದ ವಸ್ತುಗಳಿಲ್ಲವೋ। ಗುಟ್ಟು ಕಾಣಿಸೆ ಬಂತು ಹಿರಿದೇನು ಕಿರಿದೇನು। ನೆಟ್ಟನೆ ಸರ್ವಜ್ಞನ ನೆನೆಕಂಡ್ಯ ಮನುಜ।।1।। ಜಲವೆ ಸಕಲ ಕುಲಕ್ಕೆ ತಾಯಿಯಲ್ಲವೆ ಆ। ಜಲದ ಕುಲವೇನಾದರೂ ಬಲ್ಲಿರಾ। ಜಲದ ಬೊಬ್ಬುಳಿಯಂತೆ ಸ್ಥಿರವಲ್ಲ ಈ ದೇಹ। ನೆಲೆಯನರಿತು ನೀ ಹರಿಯ ನೆನೆ ಮನುಜ।।2।। ಹರಿಯೇ ಸರ್ವೋತ್ತಮ। ಹರಿಯೇ ಸರ್ವೇಶ್ವರ। ಹರಿಮಯವೆಂದು ತಿಳಿದು। ಸಿರಿಕಾಗಿನೆಲೆಯಾದಿ ಕೇಶವರಾಯನ। ಚರಣಕಮಲವನು ಕೀರ್ತಿಸುವನೆ ಕುಲಜ।।3।।

**ಕೇಳನೋ ಹರಿ ತಾಳನೊ** **ರಾಗ: ದುರ್ಗ, ಆದಿತಾಳ**

ಕೇಳನೋ ಹರಿ ತಾಳನೊ।।ಪ।। ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ।।ಅ।। ತಂಬೂರಿ ಮೊದಲಾದ ಅಖಿಳ ವಾದ್ಯಗಳಿದ್ದು। ಕೊಂಬು ಕೊಳಲು ಧ್ವನಿ ಸ್ವರಗಳಿದ್ದು। ತುಂಬುರು ನಾರದರ ಗಾನ ಕೇಳುವ ಹರಿ। ನಂಬಲಾರ ಈ ಡಂಭಕದ ಕೂಗಾಟ।।1।। ನಾನಾ ಬಗೆಯ ರಾಗ ಭಾವ ತಿಳಿದು ಸ್ವರ। ಜ್ಞಾನ ಮನೋಧರ್ಮ ಜಾತಿಯಿದ್ದು। ದಾನವಾರಿಯ ದಿವ್ಯನಾಮರಹಿತವಾದ। ಹೀನ ಸಂಗೀತ ಸಾಹಿತ್ಯಕ್ಕೆ ಮನವಿತ್ತು।।2।। ಅಡಿಗಡಿಗಾನಂದ ಬಾಷ್ಪಪುಳಕದಿಂದ। ನುಡಿ ನುಡಿಗೆ ಶ್ರೀಹರಿಯೆನ್ನುತ। ದೃಢಭಕ್ತರನು ಕೂಡಿ ಹರಿ ಕೀರ್ತನೆ ಪಾಡಿ। ಕಡೆಗೆ ಪುರಂದರವಿಠಲನೆಂದರೆ ಕೇಳ್ವ।।3।।

**ಕೈಮೀರಿ ಹೋದ ಮಾತಿಗೆ** **ರಾಗ: ಸಿಂಧುಭೈರವಿ, ಆದಿತಾಳ**

ಕೈಮೀರಿ ಹೋದ ಮಾತಿಗೆ ಹುಡುಕಾಡಬಾರದು।।ಪ।। ಮಾತು ಕೇಳದ ಮಕ್ಕಳ ಹೆಸರು ತೆಗೆಯಬಾರದು। ತನ್ನ ಪ್ರೀತಿಯಿಲ್ಲದ ಪತಿಯ ಕಂಡು ಹಿಗ್ಗಬಾರದು।।1।। ಜಾರತ್ವ ಮಾಡೋ ಪತ್ನಿಯ ಕೂಡಿ ಆಳಬಾರದು। ವೈರತ್ವ ಮಾಳ್ಪರ ಸೊಲ್ಲು ಕೇಳಬಾರದು।।2।। ದುಷ್ಟೆ ಕರ್ಕಶಿ ಸ್ತ್ರೀಯಳ ಹೆಸರು ತೆಗೆಯಬಾರದು। ಹತ್ತು ಮಂದಿಗಂಜದವನ ಸ್ನೇಹಿಸಬಾರದು।।3।। ಪಂಕ್ತಿಯಲ್ಲಿ ಪರಪಂಕ್ತಿ ಮಾಡಬಾರದು। ಮಂಕು ಜೀವನಾಗಿ ಮುಕ್ತಿ ಬೇಡಬಾರದು।।4।। ಆಚಾರಹೀನನ ಮನೆಯೊಳೂಟ ಮಾಡಬಾರದು। ವಿಚಾರ ಇಲ್ಲದ ಸಭೆಯೊಳು ಕೂಡಬಾರದು।।5।। ಪರಪುರುಷರಿದ್ದೆಡೆಯೊಳೊಬ್ಬಳಿರಲುಬಾರದು। ಪುರಂದರವಿಠಲನ ಧ್ಯಾನ ಮರೆಯಬಾರದು।।6।।

**ಕೊಡುವ ಕರ್ತ ಬೇರೆ ಇರುತಿರೆ** **ರಾಗ: ಸುರಟಿ, ಆದಿತಾಳ**

ಕೊಡುವ ಕರ್ತ ಬೇರೆ ಇರುತಿರೆ ಬಿಡು ಬಿಡು ಚಿಂತೆಯನು।।ಪ।। ಒಡೆಯನಾಗಿ ಮೂರ್ಜಗವನು ಪಾಲಿಪ। ಬಡವರುದ್ಧಾರಕ ಭಕ್ತರ ಪ್ರಿಯನು।।ಅ।। ಕಲ್ಲಿನೊಳಗೆ ಇರುವ ಕಪ್ಪೆಗೆ ಅಲ್ಲೆ ಉದಕ ಕೊಡುವ। ಎಲ್ಲ ಕೋಟಿ ಜೀವರಾಶಿಗಳನೆ ಕಾಯ್ವ। ವಲ್ಲಭ ಶ್ರೀಹರಿ ಎಲ್ಲೆಲ್ಲಿರುತಿರೆ।।1।। ಆನೆಗೈದುಮಣದ ಆಹಾರವ। ತಾನೆ ತಂದು ಕೊಡುವ।। ದೀನರೊಡೆಯ ಶ್ರೀನಿವಾಸ ದಯಾನಿಧಿ। ಮಾನದಿಂದ ಕಾಯುವ ಭಾನುಕೋಟಿ ತೇಜ।।2।। ಸರಸಿಜಾಕ್ಷ ತನ್ನ ಸೇರಿದ ಜನರನು ಬಿಡನಣ್ಣ। ಪರಮ ದಯಾನಿಧಿ ಭಕ್ತರ ಸಲಹುವ। ಪುರಂದರವಿಠಲನು ಪುಷ್ಪಶರನ ಪಿತ।।3।।

**ಗಿಳಿಯು ಪಂಜರದೊಳಿಲ್ಲ** **ರಾಗ: ಆನಂದಭೈರವಿ**

ಗಿಳಿಯು ಪಂಜರದೊಳಿಲ್ಲ ಹರಿಹರಿಯೆ ಬರಿ ಪಂಜರವಾಯಿತಲ್ಲ।।ಪ।। ಅಕ್ಕ ಕೇಳೆ ಎನ್ನ ಮಾತು ಚಿಕ್ಕದೊಂದು ಗಿಳಿಯ ಸಾಕಿದೆ ಅಕ್ಕ ನಾನಿಲ್ಲದ ವೇಳೆ ಬೆಕ್ಕು ಕೊಂಡು ಹೋಯಿತಯ್ಯೊ।।1।। ಅರ್ಥಿಲೊಂದು ಗಿಳಿಯಸಾಕಿ ಮುತ್ತಿನ್ಹಾರವನ್ನು ಹಾಕಿದೆ ಮುತ್ತಿನ್ಹಾರ ಕೊಂಡು ಗಿಳಿಯು ಎತ್ತಲ್ಹಾರಿ ಹೋಯಿತಯ್ಯೊ।।2।। ಹಸುರು ಬಣ್ಣದ ಗಿಳಿಯು ಕುಶಲ ಬುದ್ಧಿಯ ಗಿಳಿಯು ಅಸುವುಗುಂದಿ ಮರಿಯು ತಾನು ಹಸನಗೆಡಿಸಿ ಹೋಯಿತಯ್ಯೋ।।3।। ರಾಮ ರಾಮ ಎಂಬ ಗಿಳಿ ಕೋಮಲ ಕಾಯದ ಗಿಳಿ ಸಾಮಜ ಪೋಷಕ ತನ್ನ ಪ್ರೇಮದಿ ಸಾಕಿದ ಗಿಳಿ।।4।। ಒಂಬತ್ತು ಬಾಗಿಲ ಮನೆಯೋಳ್ ತುಂಬಿದ ಸಂದಣಿ ಇರಲು ಕಂಭ ಮುರಿದು ಡಿಂಬ ಬಿದ್ದು ಅಂಬರಕ್ಕೆ ಹಾರಿ ಹೋಯಿತು।।5।। ಮುಪ್ಪಾಗದ ಬೆಣ್ಣೆ ತಿಂದು ತಪ್ಪದೆ ಹಾಕಿದ ಹಾಲ ಒಪ್ಪದಿಂದ ಕುಡಿದು ಕೈತಪ್ಪಿ ಹಾರಿಹೋಯಿತಯ್ಯೋ।।6।। ಅಂಗೈಲಾಡುವ ಗಿಳಿ ಮುಂಗೈಮೇಲಣ ಗಿಳಿ ರಂಗ ಪುರಂದರ ವಿಠಲನ್ನ ಅಂಗಣದೊಳಾಡುವ ಗಿಳಿ।।7।।

**ಜ್ಞಾನವಂತರಿಗೆ ವಿಧಿ ಕಾಡುವುದು** **ರಾಗ: ಮುಖಾರಿ, ಝಂಪೆತಾಳ**

ಜ್ಞಾನವಂತರಿಗೆ ವಿಧಿಕಾಡುವುದು ಸತ್ಯ। ಜ್ಞಾನ ಮೂಢರಿಗೆ ಹರಿನಿನ್ನ ಬಲವಯ್ಯ।।ಪ।। ಚಂದ್ರನಿಗೆ ವಿಧಿ ಕಾಡಿ ಗ್ರಹಣ ನುಂಗುವುದಾಯ್ತು। ಇಂದ್ರನಿಗೆ ವಿಧಿ ಕಾಡಿ ಭಂಗಪಡಿಸಿತು।। ಚಂದದಲಿ ಪಾಂಡವರ ವನವಾಸ ಮಾಡಿಸಿತು। ಅಂದು

ಲಲನೆ ಸೀತೆಯನ್ನು ಲಂಕೆಯಲಡಗಿಸಿತು।।1।। ಹಿಂದಕ್ಕೆ ಹರಿಶ್ಚಂದ್ರನರಣ್ಯವ ಸೇರಿಸಿತು। ಮಡದಿಯಾಗಿ ಕಾಡಿತೋ ಕರಿಬಂಟಗೆ।। ಕುಂದದೀಶ್ವರನ ಸುಡುಗಾಡು ಸೇರಿಸಿತು। ಇನ್ನು ವಿಧಿಯನು ನೋಡು ನರರ ಪಾಡೇನು।।2।। ವಿಧಿ ಕಾಡೊ ಕಾಲಕ್ಕೆ ಇಲ್ಲದಪವಾದ ಬಂತು। ಕಲಿಸಿತೊ ಸುಳ್ಳು ಕಳವು ಹಾದರ। ವಿಧಿಗೊಳಗಾಗದಾ ನರರು ಮತ್ತಿಲ್ಲ। ವಿಧಿಯ ಗೆದ್ದವ ನಮ್ಮ ಪುರಂದರ ವಿಠಲ।।3।।

**ಚಿತ್ತ ಶುದ್ಧಿ ಇಲ್ಲದವ ಅವಜ್ಞಾನಿಯೆ** **ರಾಗ: ಮುಖಾರಿ**

ಚಿತ್ತ ಶುದ್ಧಿ ಇಲ್ಲದವ ಅವಜ್ಞಾನಿಯೆ।।ಪ।। ಪಾತಕಗಳನರಿಯದವ ಮನುಜನೆ ಕೃಷ್ಣ।।ಅ.ಪ।। ಬಂಧನದೊಳಿಹ ವ್ಯಾಘ್ರ ಬಹು ತಪಸಿ ಎನಬಹುದೆ। ಸಿಂಧುವಿನೊಳಿಹ ನೊರೆ ಶೀತಕಿರಣನೆ। ಅಂಧಕನು ಕಣ್ಣ ಮುಚ್ಚಲದು ಧ್ಯಾನವೆ। ಮಂದಮತಿಯಾಗಿರಲು ಬಲು ಶೌರ್ಯವೇ।।1।। ಶ್ವಾನ ಬೂದಿಯೊಳಿರಲು ಶಿವಭಕ್ತನೆನಬಹುದೆ। ಕಾನನದೊಳಿಹ ಕಾಗೆ ವನವಾಸಿಯೇ। ಗಾಣ ತಿರುಗಲು ಎತ್ತು ದೇಶಯಾತ್ರೆ ಎನಬಹುದೆ ಬಕ। ಧ್ಯಾನವನು ಮಾಡಲು ಮೋಕ್ಷವೆ ಕೃಷ್ಣ।।2।। ತೋಳ ಅಡವಿಯ ತಿರುಗೆ ದಿಗಂಬರ ಎನಬಹುದೆ। ಗಾಳಿಯುಂಬ ಭುಜಗ ಉಪವಾಸಿಯೆ। ಆಲದಲಿ ಜಡೆಯಿರಲು ಅದು ತಪಸಿ ಎನಬಹುದೆ। ಕಾಲದಲ್ಲಿಹ ಗೂಗೆ ಹಿರಿಯ ದಾಗಬಹುದೆ।।3।। ಮಾರಿ ಮನೆಯೊಳ ಗಿರಲು ಮತ್ತೆ ಸಹಕಾರಿಯೆ। ಊರ ಒಳಗಿನ ಕಳ್ಳ ಅವ ನಂಟನೇ। ಜಾರೆಯೆಂದೆ ನಿಸುವಳು ಕುಲಗರತಿ ಎನಬಹುದೆ। ಸಂಸಾರದೊಳು ಎಚ್ಚರವಿಲ್ಲದವ ಮನುಜನೇ।।4।। ಮಂಡೂಕ ಕೂಗಲದು ಮಂತ್ರವೆಂದೆನಬಹುದೆ। ಗುಂಡು ನೀರೊಳಗಿರಲು ಅದು ಸ್ನಾನವೆ। ಪುಂಡರೀಕಾಕ್ಷ ಸಿರಿ ಪುರಂದರ ವಿಠಲನ್ನ। ಕಂಡು ಭಜಿಸದವನು ಅವ ಮನುಜನೇ ।।5।।

**ಚಿಂತ್ಯಾಕೆ ಮಾಡುತ್ತಿದ್ದಿ** **ರಾಗ : ಸಿಂಧೂಭೈರವಿ**

ಚಿಂತ್ಯಾಕೆ ಮಾಡುತ್ತಿದ್ದಿ ಚಿನ್ಮಯನಿದ್ದಾನೆ। ಚಿಂತಾರತ್ನವೆಂಬೊ ಅನಂತನಿದ್ದಾನೆ।।ಪ।। ಎಳ್ಳು ಮೊನೆಯ ಮುಳ್ಳು ಕೊನೆಯ ಎಲ್ಲೂ ಬಿಡದೆ ಒಳಗೆ ಹೊರಗೆ। ಎಲ್ಲಾ ಕಾಲದಲ್ಲಿ ಗೌರೀ ಲಕುಮಿನಲ್ಲನಿದ್ದಾನೆ।।1।। ಹಿಂದೆ ನಿನ್ನ ಸಲಹಿದರ್‍ಯಾರೋ ಮುಂದೆ ನಿನ್ನ ಕೊಲ್ಲುವರ್‍ಯಾರೋ। ಅಂದಿಗೆಂದಿಗಿಂದಿಗೂ ಅಂದಿಗೆಂದೆಂದಿಗೂ ಗೋವಿಂದನಿದ್ದಾನೆ।।2।। ನಾನು ನೀನು ಎಂಬ ಉಭಯ ಹೀನಗುಣಗಳೆಲ್ಲಾ ಕಳೆದೂ। ಸ್ವಾಮಿ ಚಿದಾನಂದ ಸುಖಸಂಪೂರ್ಣ ನಿದ್ದಾನೆ।।3।। ಬಲ್ಲಿದ ಭಜಕರ ಹೃದಯದಲ್ಲಿ ನಿಂತು ಮುದ್ದು ವಿಠಲ ಸೊಲ್ಲು ಸೊಲ್ಲಿಗವರ ಬಯಕೆ ಸಲ್ಲಿಸುತ್ತಿದ್ದಾನೆ ।।4।।

**ಜಪವ ಮಾಡಿದರೇನು ತಪವ** **ರಾಗ: ಶಿವರಂಜಿನಿ, ಝಂಪೆತಾಳ**

ಜಪವ ಮಾಡಿದರೇನು ತಪವ ಮಾಡಿದರೇನು। ವಿಪರೀತ ಕಪಟಗುಣ ಕಲುಷವಿದ್ದವರು।।ಪ।। ಆದಿಗುರುವರಿಯದೆ ಅತ್ತಲಿತ್ತಲು ತೊಳಲಿ। ವೇದಶಾಸ್ತ್ರವನೋದಿ ಬಾಯಾರಲು। ಹಾದಿಯನು ಕಾಣದಂತಿರುತಿರ್ದು ಹಲವೆಂಟು। ವಾದ ತರ್ಕದೊಳಿದ್ದ ಭೇದವಾದಿಗಳು।।1।। ನುಡಿನಡೆವ ಕಾಲದಲಿ ದಾನವ ಮಾಡದೆ ಇರಲು। ಅಡವಿಯೊಳು ಕೆರೆತುಂಬಿ ಬತ್ತಿದಂತೆ। ಮಡದಿ ಮಕ್ಕಳಿಗೆಂದು ಒಡವೆ ವಸ್ತ್ರವ ಗಳಿಸೆ। ಹಿಡಿಯಲಾ ಯಮನವರ ಕಟ್ಟಿಗೊಳಗಾಗಿ।।2।। ಚಳಿ ಮಳೆಯ ಅತಿ ಕಾರುಗತ್ತಲೆಯೊಳಗೆ। ಎದ್ದು ಹೊಳೆಯೊಳಗೆ ಮುಳುಗಿ ಜಪ ತಪವ ಮಾಡಿ। ಕಳವಳಿಸಿ ನೂರೆಂಟು ಹಲುಬಿ ಬಳಲಲು ಬೇಡ। ನಳಿನಾಕ್ಷ ಆದಿಕೇಶವನ ನೆನೆ ಮನವೇ।।3।।

**ಜಾಲಿಯ ಮರದಂತೆ ಧರೆಯೊಳು** **ರಾಗ: ಶಿವರಂಜಿನಿ, ಆದಿತಾಳ**

ಜಾಲಿಯ ಮರದಂತೆ ಧರೆಯೊಳು ದುರ್ಜನರು।।ಪ।। ಮೂಲಾಗ್ರ ಪರಿಯಂತ। ಮುಳ್ಳು ಕೂಡಿಪ್ಪಂತೆ।।ಅ।। ಬಿಸಿಲಲ್ಲಿ ಬಳಲಿ ಬಂದವರಿಗೆ ನೆರಳಿಲ್ಲ। ಹಸಿದು ಬಂದವರಿಗೆ ಹಣ್ಣು ಇಲ್ಲ। ಕುಸುಮ ವಾಸನೆಯಿಲ್ಲ ಕೂಡಲು ಸ್ಥಳವಿಲ್ಲ। ರಸದಲ್ಲಿ ಸ್ವಾದವು ವಿಷದಂತೆ ಇರುತಿಹ।।1।। ಊರಹಂದಿಗೆ ಷಡ್ರಸಾನ್ನವನಿಕ್ಕಲು। ನಾರುವ ದುರ್ಗಂಧ ಬಿಡಬಲ್ಲುದೆ। ಘೋರಪಾಪಿಗೆ ತತ್ವಜ್ಞಾನವ ಪೇಳಲು। ಕ್ರೂರಕರ್ಮವ ಬಿಟ್ಟು ಸುಜನನಾಗುವನೆ।।2।। ತನ್ನಿಂದ ಉಪಕಾರ

ತೊಟಕಾದರು ಇಲ್ಲ। ಬಿನ್ನಾಣದ ಮಾತಿಗೆ ಕೊನೆಯಿಲ್ಲ। ಅನ್ನಕ್ಕೆ ಸೇರಿದ ಕುನ್ನಿ ಮಾನವರಂತೆ ಇನ್ನಿವರ ಕಾರ್ಯವು ಪುರಂದರವಿಠಲ॥3॥

**ತನುವ ನೀರೊಳಗದ್ದಿ ಫಲವೇನು** **ರಾಗ:ಪೂರ್ವಿಕಲ್ಯಾಣಿ, ಆದಿತಾಳ**

ತನುವ ನೀರೊಳಗದ್ದಿ ಫಲವೇನು। ತನ್ನ ಮನದಲ್ಲಿ ದೃಢಭಕ್ತಿ ಇಲ್ಲದ ಮನುಜನು ॥ಪ॥ ದಾನ ಧರ್ಮಗಳನ್ನು ಮಾಡುವುದೇ ಸ್ನಾನ। ಜ್ಞಾನ ತತ್ವಂಗಳ ತಿಳಿಯುವುದೇ ಸ್ನಾನ। ಹೀನ ಪಾಶಂಗಳ ಅರಿಯುವುದೇ ಸ್ನಾನ। ಧ್ಯಾನಾದಿ ಮಾಧವನ ನೋಡುವುದೇ ಸ್ನಾನ॥1॥ ಗುರುಗಳ ಶ್ರೀಪಾದ ತೀರ್ಥವೆ ಸ್ನಾನ। ಹಿರಿಯರ ದರ್ಶನ ಮಾಡುವುದೇ ಸ್ನಾನ। ಕರೆದು ಅತಿಥಿಗನ್ನ ಇಡುವುದೇ ಸ್ನಾನ। ನರಹರಿ ಚರಣವ ನಂಬುವುದೇ ಸ್ನಾನ॥2॥ ದುಷ್ಟರ ಸಹವಾಸ ಬಿಡುವುದೆ ಸ್ನಾನ। ಶಿಷ್ಟರ ಸಹವಾಸ ಮಾಡುವುದೇ ಸ್ನಾನ। ಸೃಷ್ಟಿಯೊಳಗೆ ಸಿರಿ ಪುರಂದರ ವಿಠಲನ ಮುಟ್ಟಿ ಭಜಿಸಿ ಪುಣ್ಯ ಪಡೆಯುವುದೇ ಸ್ನಾನ॥3॥

**ತರವಲ್ಲ ತಗಿ ನಿನ್ನ ತಂಬೂರಿ (ತತ್ವಪದ)**

ತರವಲ್ಲ ತಗಿ ನಿನ್ನ ತಂಬೂರಿ - ಸ್ವರ ಬರದೆ ಬಾರಿಸದಿರು ತಂಬೂರಿ॥ ಸರಸ ಸಂಗೀತದ ಕುರುಹುಗಳರಿಯದೆ। ಬರಿದೆ ಬಾರಿಸದಿರು ತಂಬೂರಿ॥ ಮದ್ದಲಿ ದನಿಯೊಳು ತಂಬೂರಿ - ಅದ ತಿದ್ದಿ ನುಡಿಸಬೇಕೊ ತಂಬೂರಿ। ಸಿದ್ಧ ಸಾಧಕರ ಸುವಿದ್ಯೆಗೆ ಒದಗುವ। ಬುದ್ಧಿವಂತಗೆ ತಕ್ಕ ತಂಬೂರಿ॥1॥ ಬಾಳಬಲ್ಲವರಿಗೆ ತಂಬೂರಿ - ದೇವ ಭಾಳಾಕ್ಷ ರಚಿಸಿದ ತಂಬೂರಿ। ಹೇಳಿದ ಏನಿದರ ಹಂಚಿಕೆ ತಿಳಿಯದ ತಾಳಗೇಡಿಗೆ ಸಲ್ಲ ತಂಬೂರಿ॥2॥ ಸತ್ಯ ಶರಧಿಯೊಳು ತಂಬೂರಿ - ನಿತ್ಯ ಉತ್ತಮರಾಡುವ ತಂಬೂರಿ। ಬತ್ತೀಸರಾಗದ ಬಗೆಯನರಿಯದಂಥ ಕತ್ತಿಗಿನ್ಯಾತಕೆ ತಂಬೂರಿ॥3॥ ಹಸನಾದ ಮ್ಯಾಳಕೆ ತಂಬೂರಿ - ಇದು ಕುಶಲರಿಗೊಪ್ಪುವ ತಂಬೂರಿ। ಶಿಶುನಾಳಧೀಶನ ಓದುಪುರಾಣದಿ ಹಸನಾಗಿ ಬಾರಿಸೊ ತಂಬೂರಿ॥4॥

**ತಾಳಬೇಕು ತಕ್ಕ ಮೇಳ** **ರಾಗ: ಭೈರವಿ, ಛಾಪುತಾಳ**

ತಾಳ ಬೇಕು ತಕ್ಕ ಮೇಳ ಬೇಕು ಶಾಂತ॥ಪ॥ ವೇಳೆ ಬೇಕು ಗಾನವನ್ನು ಕೇಳಬೇಕೆಂಬುವರಿಗೆ॥ಅ॥ ಯತಿಪ್ರಾಸವಿರಬೇಕು। ಗತಿಗೆ ನಿಲ್ಲಿಸಬೇಕು। ರತಿಪತಿಪಿತನೊಳು ಅತಿ ಪ್ರೇಮವಿರಬೇಕು॥1॥ ಗಳ ಶುದ್ಧವಿರಬೇಕು ತಿಳಿದು ಪೇಳಲು ಬೇಕು। ಕಳವಳ ಬಿಡಬೇಕು ಕಳೆಮುಖವಿರಬೇಕು॥2॥ ಅರಿತವರಿರಬೇಕು। ಹರುಷ ಹೆಚ್ಚಲಿಬೇಕು। ಗುರುಮಧ್ವಪತಿ ವಿಠಲನೆ ಪರದೈವವೆನಬೇಕು॥3॥

**ತಾಸು ಬಾರಿಸುತಿದೆ ಕೇಳಿ** **ರಾಗ: ಮಧ್ಯಮಾವತಿ, ಆದಿತಾಳ**

ತಾಸು ಬಾರಿಸುತಿದೆ ಕೇಳಿ, ಹರಿದಾಸರೆಲ್ಲ॥ಪ॥ ಶ್ರೀಶನ ಭಜನೆಯ ಮಾಡದ ಮನುಜನ ಆಯುಷ್ಯ ವೃಥಾ ಹೋಯಿತು ಎಂದು॥ಅ॥ ಹಾಸು ಮಂಚ ಸುಪ್ಪತ್ತಿಗೆಯಲ್ಲಿ ಹಗಲು ಇರುಳು। ಹೇಸರ ಕತ್ತೆಯಂತೆ ಹೊರಳಿ ಸ್ತ್ರೀಯರ ಕೂಡಿ। ಬೇಸರದೆ ನಿತ್ಯ ಉರುಳಿ ಈ ಪರಿಯಿಂದಲಿ ಮಾನುಷ ಆಯುವು। ವೃಥಾ ಹೋಯಿತು ಹೋಯಿತು ಎಂದು॥1॥ ವಾರ್ಧಕ್ಯ ಬಾಲ್ಯ ಕೆಲವು ಕಾಲ ವಿವೇಕವಿಲ್ಲದ। ಬುದ್ಧಿಮಾಂದ್ಯ ಕೆಲವು ಕಾಲ ಅಜ್ಞಾನದಿಂದ॥ ನಿದ್ರೆಯಿಂದಲಿ ಅತಿಲೋಲ ಈ ಪರಿಯಿಂದಲಿ ಕಾಲನ ಮನೆಯು। ಸಮೀಪವಾಯಿತು ಆಯಿತು ಎಂದು॥2॥ ಕಂಡ ಕಂಡ ವಿಷಯವ ಕಾಮಿಸಿ ಕಷ್ಟವ ಪಡದಲೆ। ತಾಂಡವ ಶ್ರೀಕೃಷ್ಣನ ಭಜಿಸಿ। ಪುಂಡರೀಕಾಕ್ಷನ ಪುರಾಣ ಪುರುಷನ। ಪುರಂದರವಿಠಲನ ಭಜಿಸಿ ಬದುಕು ಎಂದು ಢಂಢಣಾ ಢಣರೆಂದು॥3॥

**ತೀರ್ಥಯಾತ್ರೆ ಮಾಡಬೇಕು** **ರಾಗ: ಶಂಕರಾಭರಣ-ನೋಟ್**

ತೀರ್ಥಯಾತ್ರೆ ಮಾಡಬೇಕು। ಪುಣ್ಯಕ್ಷೇತ್ರ ಸುತ್ತಬೇಕು। ಪಾಪಹೊರೆಯ ಕಳಚಬೇಕು। ಹರಿಗೆ ಶರಣು ಎನ್ನಬೇಕು॥ಪ॥

ಪಂಢರಿಪುರಕೆ ಹೋಗಬೇಕು। ಪಂಢರಿನಾಥನ ನೋಡಬೇಕು। ಪಂಢರಿ ಭಜನೆ ಮಾಡಬೇಕು। ಲಜ್ಜೆಬಿಟ್ಟು ಕುಣಿಯಬೇಕು॥1॥ ಕಾಶಿಯಾತ್ರೆಗೆ ಹೋಗಬೇಕು। ಕಾಶಿ ಈಶನ ಸ್ಮರಿಸಬೇಕು। ಕಾಶಿಗಂಗೆಲಿ ಮುಳುಗಬೇಕು। ಮನದ ಕಲ್ಮಶ ತೊಳೆಯಬೇಕು॥2॥ ಬದರಿ ಕೇದಾರ ನೋಡಬೇಕು। ಜನ್ಮ ಪಾವನಗೊಳಿಸಬೇಕು। ಭಕ್ತಿಯಿಂದ ಭಜಿಸಬೇಕು। ಚೈತನ್ಯದಾಸನಮಿಸ ಬೇಕು॥3॥

### ಧರ್ಮಶ್ರವಣವಿದೇತಕೆ ಮೂರ್ಖಗೆ — ರಾಗ: ದುರ್ಗ, ಆದಿತಾಳ

ಧರ್ಮಶ್ರವಣವಿದೇತಕೆ ಮೂರ್ಖಗೆ। ಧರ್ಮಶ್ರವಣ ವಿದೇತಕೆ॥ಪ॥ ಕರ್ಮಾನುಷ್ಠಾನವ ಎಸಗದಿರುವ। ದುರ್ಮತಿಗೇತಕೆ। ಬ್ರಾಹ್ಮಣಜನ್ಮ ॥ಅ.ಪ.॥ ಕೋಣಗೆ ವೀಣಾಗಾನವಿದೇತಕೆ। ಮಾಣಿಕ್ಯವೇತಕೆ ಮರ್ಕಟಗೆ। ತ್ರಾಣವು ತೊಲಗಿದ ಹೆಣ್ಣಿಗಿದೇತಕೆ। ಕಟ್ಟಾಣಿ ಮುತ್ತಿನ ಹಾರವು ಕೊರಳಿಗೆ॥1॥ ಷಡುರಸ ಅನ್ನವಿದೇತಕೆ ಗಾರ್ದಭಗೆ। ಉಡುಗೊರೆ ಸಹಿತಲೆ ಶ್ವಾನನಿಗೆ। ಕಡುವೃದ್ಧಗೆ ಮೈನೆರೆದ ಹೆಣ್ಣಿನ। ಒಡನೆ ಭೋಗಿಪೆನೆಂಬಭಿಲಾಷೆಯೇಕೆ॥2॥ ಹುಟ್ಟು ಕುರುಡಗೆ ದೀಪವಿದೇತಕೆ ಭ್ರಷ್ಟನಿಗೇತಕೆ ಕುಲಧರ್ಮ॥ ಸೃಷ್ಟಿಯೊಳಗಧಮನಿಗೆ ಪುರಂದರವಿಠಲ। ಮುಟ್ಟಿ ಭಜಿಪೆ ನೆಂಬಭಿಲಾಷೆಯೇತಕೆ॥3॥

### ಧರ್ಮ ಏಕಃ ಸಹಾಯಃ — ರಾಗ: ಹಂಸಧ್ವನಿ, ತಾಳ

ಧರ್ಮ ಏಕಃ ಸಹಾಯಃ ಪರಬ್ರಹ್ಮ ಮೂರುತಿಯ ಪಾದವ ಭಜಿಪ ಸುಜನರಿಗೆ॥ಪ॥ ಹರಿಭಕುತಿಯನು ಮಾಳ್ಪ ಪರಮಭಾಗವತರಿಗೆ। ಕರೆದು ಭೂಸುರರಿಗನ್ನವನಿತ್ತಗೆ॥ ಪರಸತಿಯರನು ಕಂಡು ಮನವೆಳಸದಿದ್ದವಗೆ। ಪರರುಪದ್ರವ ಬಿಡಿಸಿ ಪೊರೆವ ಸುಜನರಿಗೆಲ್ಲ॥1॥ ನಿತ್ಯನೇಮವ ಬಿಡದೆ ಸತ್ಯದಲಿ ನಡೆದವಗೆ। ವ್ಯರ್ಥವಾಗಿ ಹೊತ್ತು ಕಳೆಯದವಗೆ। ಚಿತ್ತಶುದ್ಧಿಯಲಿ ಪರವಸ್ತು ಹರಿಯನು। ತನ್ನ ಹೃತ್ಕಮಲಮಧ್ಯದಲಿ ಇಟ್ಟು ಭಜಿಪರಿಗೆಲ್ಲ॥2॥ ಮಾತೆಪಿತರುಗಳನ್ನು ಪ್ರಿಯದಲ್ಲಿ ಪೊರೆದವಗೆ। ಯಾತ್ರೆಗಳ ಮಾಳ್ಪ ಪುಣ್ಯಾತ್ಮನಿಗೆ। ಧಾತ್ರಿಯೊಳು ಪುರಂದರವಿಠಲನ ನಾಮವನು। ಕೀರ್ತನೆ ಮಾಡಿ ಲೋಲಾಡುತಿಹ ಸುಜನರಿಗೆ॥3॥

### ನಿಜವಿರಬೇಕು ಸಜ್ಜನರಿಗೆ ಒಂದು (ಸುಳಾದಿ)

ನಿಜವಿರಬೇಕು ಸಜ್ಜನರಿಗೆ ಒಂದು॥ಪ॥ ಅಜ ಜನಕಾನೆ ಈ ತ್ರಿಜಗಕೆ ಒಡೆಯನೆಂದು॥ಅ.ಪ॥ ಉದಯಾಸ್ತಮಾನ ಮಾಡುವ ವ್ಯಾಪಾರವು ಪದುಮಾಕ್ಷ ಕೃಷ್ಣನ ಸೇವೆಯೆಂದು। ಸುದತಿಯೊಡನೆ ಕೂಡಿ। ಮಧುರ ಮಾತುಗಳಾಡಿ। ಮಧುವೈರಿ ಚರಿತೆಯ ಮುದದಿ ಕೇಳುವಂಥ॥1॥ ಮಡದಿ ಮಕ್ಕಳು ತನ್ನ ಒಡಹುಟ್ಟಿದವರೆಲ್ಲ। ಒಡೆಯನ ಅಡಿಗೆ ಸೇವಕರು ಎಂದು। ಧೃಡದಿ ತಿಳಿದು ಮೃಡನೊಡೆಯನ ಪಾದವ। ಬಿಡದೆ ಭಜಿಸುವಂಥ ದೃಢಬುದ್ಧಿ ಎಂಬುವ॥2॥ ಮಾತಾ ಪಿತರು ಸುತಭ್ರಾತರಿಷ್ಟಾಬಂಧು। ವ್ರಾತರೆಲ್ಲರು ಹರಿಗೆ ದೂತರೆಂದು। ಮಾತುಳಾಂತಕ ತಂದೆ ಮುದ್ದು ಮೋಹನ ವಿಠಲ। ಖ್ಯಾತನೆಂದು ಪಾಡಿ ಪ್ರೀತಿ ಪೊಂದುವುದಕ್ಕೆ॥3॥

### ನಿತ್ಯವಲ್ಲ2 ಅನಿತ್ಯ ದೇಹವಿದಣ್ಣ — ರಾಗ : ಕಾಂಬೋದಿ, ಆದಿತಾಳ

ನಿತ್ಯವಲ್ಲ ನಿತ್ಯವಲ್ಲ ಅನಿತ್ಯ ದೇಹವಿದಣ್ಣ॥ಪ॥ ಮತ್ತೆ ಮುರಾರಿ ಕೃಷ್ಣನ ನೆನೆಯಲು। ಮುಕ್ತಿಗೆ ಸಾಧನವಣ್ಣ ದೇಹ॥ಅ॥ ಮಾನಿನಿಯರ ಕುಚಕೆ ಮರಳಾಗದಿರು। ಮಾಂಸದ ಗಂಟುಗಳಲ್ಲಿ॥ ನಾನಾ ಪರಿಯಲಿ ಮೋಹಪಡದಿರು। ಹೀನಮೂತ್ರದ ಕುಳಿಯಲ್ಲಿ॥ ಜಾನಕಿ ರಮಣನ ಧ್ಯಾನವ ಮಾಡಲು। ಜಾಣನಾಗುವಿ ಅಲ್ಲಿ, ಪ್ರಾಣಿ॥1॥ ತಂದೆ ತಾಯಿ ಅಣ್ಣ ತಮ್ಮಂದಿರು। ಬಂಧುಬಳಗದವರೆಲ್ಲ। ಹೊಂದಿ ಹೊರೆಯುವ ನೆಂಟರಿಷ್ಟರು। ಹರಿದು ತಿಂಬುವರೆಲ್ಲ। ಬಂದು ಯಮದೂತರು ಸೆಳೆದೊಯ್ಯುವಾಗ। ಹಿಂದೆ ಬಾಹೋರಿಲ್ಲ ಪ್ರಾಣಿ॥2॥ ಕತ್ತಲೆ ಬೆಳದಿಂಗಳ ಸಂಸಾರ ಕಟ್ಟೋ ಧರ್ಮದ ಮಟ್ಟಿ। ಚಿತ್ತ ಶುದ್ಧನಾಗಿ ನಡೆಯದಿದ್ದರೆ। ವ್ಯರ್ಥವಾಗಿ ನೀ ಕೆಟ್ಟಿ। ಚಿತ್ತಜನಯ್ಯ ಶ್ರೀ ಪುರಂದರವಿಠಲನ। ಭಜಿಸೊ ಬೇಗ ಮನಮುಟ್ಟಿ॥3॥

**ನೇಮವಿಲ್ಲದ ಹೋಮವ್ಯಾತಕಯ್ಯಾ** **ರಾಗ: ದುರ್ಗ, ರೂಪಕತಾಳ**

ನೇಮವಿಲ್ಲದ ಹೋಮವ್ಯಾತಕಯ್ಯಾ। ರಾಮನಾಮವ ನೆನೆದು ಸುಖಿಯಾಗು ಮನುಜ।।ಪ।। ನೀರ ಮುಳುಗುವದೇಕೆ ನಾರಿಯನು ಬಿಡಲೇಕೆ। ವಾರಕೊಂದುಪವಾಸ ಮಾಡುವುದು ಏಕೆ। ನಾರಸಿಂಹನ ನಾಮ ಬಾರಿಬಾರಿಗು ನೆನೆಯೆ। ಘೋರ ಪಾಪಗಳೆಲ್ಲ ಹಾರಿಹೋಗುವುವೋ।।1।। ಅಂಬರವಿಲ್ಲದಿರಲೇಕೆ ತಾಂಬೂಲ ಬಿಡಲೇಕೆ। ಡಾಂಭಿಕತನದ ಆಚರಣೆ ಏಕೆ। ಅಂಬುಜಾಕ್ಷನ ನಾಮ ನಂಬಿ ನೀ ನೆನೆದರೆ। ಇಂಬುಂಟು ವೈಕುಂಠ ಪುರದೊಳಗೆ ಮನುಜ।।2।। ಬಂಧನದೊಳು ಸಿಲುಕಿ ಹರಿಯನ್ನು ನೆನೆದರೆ। ಬೆಂದು ಪೋಗುವುವೆಲ್ಲ ದುರಿತಂಗಳು। ಬಂದ ಬವಣೆಗಳನ್ನು ಒಂದುಳಿಯದೆಲೆ ಕಳೆವ। ಚೆಂದಾದ ನೆಲೆಯಾದಿ ಕೇಶವನ ನೆನೆಯೋ।।3।।

**ನಿಂದಕರಿರಬೇಕಿರಬೇಕು** **ರಾಗ: ನಾದನಾಮಕ್ರಿಯ, ಆದಿತಾಳ**

ನಿಂದಕರಿರಬೇಕಿರಬೇಕು।।ಪ।। ಹಂದಿಯಿದ್ದರೆ ಕೇರಿ ಹ್ಯಾಂಗೆ ಶುದ್ಧಿಯೋ ಹಾಂಗೆ।।ಅ।। ಅಂದಂದು ಮಾಡಿದ ಪಾಪವೆಂಬ ಮಲ। ತಿಂದು ಹೋಗುವರಯ್ಯ ನಿಂದಕರು।। ವಂದಿಸಿ ಸ್ತುತಿಸುವ ಜನರೆಲ್ಲರು ನಮ್ಮ। ಪೊಂದಿದ ಪುಣ್ಯವನೊಯ್ಯುವರಯ್ಯ।।1।। ದುಷ್ಟಜನರು ಈ ಸೃಷ್ಟಿಯೊಳಿದ್ದರೆ। ಶಿಷ್ಟಜನರಿಗೆಲ್ಲ ಕೀರ್ತಿಗಳು। ಇಷ್ಟಪ್ರದ ಶ್ರೀಕೃಷ್ಣ ನಿನ್ನೊಳು। ಇಷ್ಟೇ ವರವನು ಬೇಡುವೆನಯ್ಯ।।2।। ದುರುಳ ಜನಂಗಳು ಚಿರಕಾಲವಿರುವಂತೆ। ಕರವ ಮುಗಿದು ವರವ ಬೇಡುವೆನು।। ಪರಿಪರಿ ತಮಸಿಗೆ ಗುರಿಯಹರಲ್ಲದೆ। ಪರಮ ದಯಾನಿಧೆ ಪುರಂದರವಿಠಲ।।3।।

**ಪ್ರಾಚೀನ ಕರ್ಮವಿದು ಬಿಡಲರಿಯದು** **ರಾಗ:ಅಭೋಗಿ**

ಪ್ರಾಚೀನ ಕರ್ಮವಿದು ಬಿಡಲರಿಯದು। ಯೋಚನೆಯ ಮಾಡಿ ಬಳಲುವುದೇಕೋ ಮನುಜ।।ಪ।। ಸೇತುವೆಯ ದಾಟಿ ಲಂಕೆಗೆ ಪೋಗಿ ಹನುಮಂತ। ಖ್ಯಾತಿಯಲಿ ರಾವಣನ ಪುರವನಳಿಸಿ।। ಸೀತೆಯನು ಕಂಡು ಶ್ರೀರಾಮನಿಗೆ ಪೇಳಿದರೆ। ಪ್ರೀತಿಯಿಂದ ರೂಪವನು ಕೊಡಲಿಲ್ಲ ಹರಿಯು।।1।। ಲೋಕವೀರೇಳನ್ನು ತಿರುಗುವಾ ರವಿರಥಕೆ। ಏಕಾಗಾಲಿಯು ಏಳು ಕುದುರೆಯಿಂದ।। ಆಕಾಶಮಾರ್ಗದಲಿ ತೊಳಲಿ ಬಹ ಅರುಣನಿಗೆ। ಬೇಕೆಂಬ ಚರಣಗಳ ಕೊಡಲಿಲ್ಲ ಹರಿಯು।।2।। ಸಾಸಿರನಾಮದೊಡೆಯ ಬಾಡದಾದಿಕೇಶವನ। ಬೇಸರದೆ ಹೆಗಲ ಮೇಲಿಟ್ಟುಕೊಂಡು। ದೇಶಾಧಿದೇಶಗಳ ತಿರುಗುವ ಗರುಡನಿಗೆ। ನಾಸಿಕದ ಕೊನೆಡೊಂಕ ತಿದ್ದಲಿಲ್ಲ ಹರಿಯು।।3।।

**ಬೇಡುವರೋ ಸುಖವ** **ರಾಗ:ಅಭೇರಿ**

ಬೇಡುವರೋ ಸುಖವ ಬೇಡುವರೋ ಸುಖವ।।ಪ।। ಬೇಡುವರೋ ಸುಖ ಬೇಡರೋ ಕಷ್ಟವ ಮಾಡಲರಿಯರಿದ ಕುಪಾಯವಾ ಜನ।।ಅ.ಪ।। ಕಿಟ್ಟ ತುಳಿದು ಒಮ್ಮೆನ್ ಹಿಟ್ಟಾ ಬೀಸುವರೋ। ಕುಟ್ಟಾರೋ ರಂಗವಲ್ಲಿಯ ಜನ।।2ಸಾರಿ।। ಸಾಲುಸಾಲೆಮ್ಮೆಯ ಸೋಲಾದೆ ತೊಳೆವರು। ಸಾಲಿಗ್ರಾಮಕೆ ನೀರೆರೆಯಾರೊ ಜನ।।1।। ಬೀಗರೂಟಕೆ ಅನೇಕ ಭೋಗವು ಜೋಳವು। ಓಗರ ಬ್ರಾಹ್ಮಣರೆಡೆಯೊಳು। ಘಮ್ಮನೆ ತುಪ್ಪ ತಮ್ಮನೆಯವರಿಗೆ। ಘಮ್ಮಟ್ಟು ದೇವ ಬ್ರಾಹ್ಮಣಾರಿಗೇ।।2।। ಇದ್ದ ಪದಾರ್ಥವನ್ನು ಶುದ್ಧ ಭಕ್ತಿಯಿಂದ। ಮದ್ವೇಶಗರ್ಪಿಸಿ ಭುಂಜಿಸರೋ। ಕೆಟ್ಟದ್ದು ತಾವ್ ಮಾಡಿ ಬಿಟ್ಟೆಮ್ಮನು ಪ್ರಾಣೇಶ ವಿಠಲನ ಮಿಡುಕುವರೋ ಜನ।।3।।

**ಬಿದಿರು ನಾನಾರಿಗಲ್ಲದವಳು (ತತ್ವಪದ)** **ರಾಗ:ಕಾನಡ**

ಬಿದಿರು ನಾನಾರಿಗಲ್ಲದವಳು।।ಪ।। ಹುಟ್ಟುತ ಹುಲ್ಲಾದೆ। ಬೆಳೆಯುತ ಮರವಾದೆ। ಸುಂದರ ಸ್ತ್ರೀಯರಿಗೆ ಕೇರುವ ಮೊರವಾದೆ।।1।। ಮುದುಕಗೆ ಬಡಿಗ್ಯಾದೆ। ಮುತ್ಯಾಗ ಬೆತ್ತವಾದೆ। ದೊಡ್ಡ ದೊಡ್ಡ ಮಹಾತ್ಮರ ಕೈಯೊಳಗೆ ಬೆತ್ತವಾದೆ।।2।। ಅಂಬಿಗಗೆ ಕೋಲಾದೆ। ದಡಿಗೆ ನಾನಾದೆ। ನೀಟುಳ್ಳ ಹುಡುಗರಿಗೆ ಬೇಟೆಯ ಬಡಿಗ್ಯಾದೆ।।3।। ಪಲ್ಲಕ್ಕಿ ದಂಡಿಗೆಯಾದೆ। ಪುತ್ರಿಗೆ ಬುಟ್ಟಿಯಾದೆ। ಎಲ್ಲಮ್ಮನ ಗುಡ್ಡದೊಳಗೆ ಅಡ್ಲಿಗಿ ನಾನಾದೆ।।4।। ಹಂದರ ಹಾಲಗಂಬವಾದೆ। ದಂಡಿ ಬಾಸಿಂಗವಾದೆ। ದೊಡ್ಡ ದೊಡ್ಡ ಮಠದೊಳಗೆ ಕಜ್ಜಾಯ ಬುಟ್ಟಿಯಾದೆ।।5।। ತಿಪ್ಪಿಯ ತೆಳಗಿದ್ದೆ।

ಅದರುದ್ದಬೆಳೆದಿದ್ದೆ। ಸಿದ್ಧರಾಮೇಶ್ವರನಿಗೆ ನಂದಿ ಕೋಲಾದೆ॥6॥ ದೇಶದೊಳು ಶಿಶುನಾಳಧೀಶನ ಮಠದೊಳಗೆ। ಸಾಧುರ ಕೈಯೊಳಗೆ ಏಕತಾರಿ ಕೊಳವೆಯಾದೆ॥7॥

**ಬೇವು ಬೆಲ್ಲದೊಳಿಡಲೇನು ಫಲ** **ರಾಗ: ಬೇಹಾಗ್, ಅಟತಾಳ**

ಬೇವು ಬೆಲ್ಲದೊಳಿಡಲೇನು ಫಲ। ಹಾವಿಗೆ ಹಾಲೆರೆದೇನು ಫಲ॥ಪ॥ ಕುಟಿಲವ ಬಿಡದಿಹ ಕುಜನರು ಮಂತ್ರವ। ಪಠನೆಯ ಮಾಡಿದರೇನುಫಲ॥ ಸಟೆಯನ್ನಾಡುವ ಮನುಜರು ಸಂತತ। ನಟನೆಯ ಮಾಡಿದರೇನು ಫಲ॥1॥ ಕಪಟತನದಲಿ ಕಾಡುತ ಜನರನು। ಜಪವನು ಮಾಡಿದರೇನು ಫಲ॥ ಕುಪಿತತನುವನು ಬಿಡದೆ ನಿರಂತರ। ಜಪವನು ಮಾಡಿದರೇನು ಫಲ॥2॥ ಮಾತಾಪಿತರನು ಬಳಲಿಸಿದಾತನು। ಯಾತ್ರೆಯ ಮಾಡಿದರೇನು ಫಲ॥ ಘಾತಕತನವನು ಬಿಡದೆ ನಿರಂತರ। ಗೀತೆಯನೋದಿದರೇನು ಫಲ॥3॥ ಪತಿಗಳ ನಿಂದಿಪ ಸತಿಯರು ಬಹು ವಿಧ। ವ್ರತಗಳ ಮಾಡಿದರೇನು ಫಲ॥ ಅತಿಥಿಗಳೆಡೆಯಲಿ ಭೇದವ ಮಾಡುತ। ಗತಿಯನು ಬಯಸಿದರೇನು ಫಲ॥4॥ ಹೀನ ಗುಣಂಗಳು ಹಿಂಗದೆ ಗಂಗೆಯ। ಸ್ನಾನವ ಮಾಡಿದರೇನು ಫಲ। ಶ್ರೀನಿಧಿ ಪುರಂದರವಿಠಲನ ನೆನೆಯದೆ। ಮೌನವ ಮಾಡಿದರೇನು ಫಲ॥5॥

**ಮಾಡು ಸಿಕ್ಕದಲ್ಲಾ ಮಾಡಿನ ಗೂಡು** **ರಾಗ: ಮಾಯಾಮಾಳವಗೌಳ, ಆದಿತಾಳ**

ಮಾಡು ಸಿಕ್ಕದಲ್ಲಾ ಮಾಡಿನ ಗೂಡು ಸಿಕ್ಕದಲ್ಲಾ। ಜೋಡು ಹೆಂಡಿರಂಜಿ ಓಡಿಹೋಗುವಾಗ। ಗೋಡೆ ಬಿದ್ದು ಬಯಲಾಯಿತಲ್ಲಾ॥ಪ॥ ಎಚ್ಚರಗೊಳಲಿಲ್ಲಾ। ಮನವೇ ಹುಚ್ಚನಾದೆನಲ್ಲಾ॥ ಅಚ್ಚಿನೊಳಗೆ ಮೆಚ್ಚು ಮೆಚ್ಚಿನೊಳಗೆ ಅಚ್ಚು। ಕಿಚ್ಚೆದ್ದು ಹೋಯಿತಲ್ಲಾ॥1॥ ಮುಪ್ಪು ಬಂದಿತಲ್ಲಾ। ಪಾಯಸ ತಪ್ಪದೆ ಉಣಲಿಲ್ಲಾ॥ ತುಪ್ಪದ ಬಿಂದಿಗೆ ತಿಪ್ಪೆ ಮೇಲೆ। ಧೊಪ್ಪನೆ ಬಿತ್ತಲ್ಲಾ॥2॥ ಯೋಗವು ಬಂತಲ್ಲಾ। ಬದುಕು ವಿಭಾಗವಾಯಿತಲ್ಲಾ। ಭೋಗಿಶಯನ ಶ್ರೀ ಪುರಂದರವಿಠಲನ। ಆಗ ನೆನೆಯಲಿಲ್ಲಾ॥3॥

**ಮಾನವಜನ್ಮ ದೊಡ್ಡದು ಇದ** **ರಾಗ: ಪಂತುವರಾಳಿ, ಅಟತಾಳ**

ಮಾನವಜನ್ಮ ದೊಡ್ಡದು, ಇದ ಹಾನಿ ಮಾಡಲಿಬೇಡಿ ಹುಚ್ಚಪ್ಪಗಳಿರಾ॥ಪ॥ ಕಣ್ಣು ಕೈ ಕಾಲ್ ಕಿವಿ ನಾಲಿಗೆ ಇರಲಿಕ್ಕೆ। ಮಣ್ಣು ಮುಕ್ಕಿ ಮರುಳಾಗುವರೆ॥ ಹೆಣ್ಣು ಮಣ್ಣಿಗಾಗಿ ಹರಿಯ ನಾಮಾಮೃತ। ಉಣ್ಣದೆ ಉಪವಾಸ ಇರುವರೆ ಖೋಡಿ॥1॥ ಕಾಲನ ದೂತರು ಕಾಲ್‌ಪಿಡಿದೆಳೆವಾಗ। ತಾಳು ತಾಳೆಂದರೆ ತಾಳುವರೆ॥ ಧಾಳಿ ಬಾರದ ಮುನ್ನ ಧರ್ಮವ ಗಳಿಸಿರೊ ಸುಳ್ಳಿನ ಸಂಸಾರ ಸುಳಿಗೆ ಸಿಕ್ಕಲುಬೇಡಿ॥2॥ ಏನು ಕಾರಣ ಯದುಪತಿಯನು ಮರೆತಿರಿ। ಧನಧಾನ್ಯ ಸತಿಸುತರು ಕಾಯುವರೆ। ಇನ್ನಾದರು ಏಕೋಭಾವದಿ ಭಜಿಸಿರೊ। ಚೆನ್ನ ಶ್ರೀ ಪುರಂದರವಿಠ್ಠಲರಾಯನ॥3॥

**ಮಾತಿಗೆ ಬಾರದ ವಸ್ತು** **ರಾಗ: ಹಿಂದೋಳ, ಆದಿತಾಳ**

ಮಾತಿಗೆ ಬಾರದ ವಸ್ತು ಬಹಳಿದ್ದರೇನು। ಹೋತಿನ ಕೊರಳೊಳಗೆ ಮೊಲೆ ಇದ್ದರೇನು॥ಪ॥ ತಾನು ಉಣ್ಣದ ದ್ರವ್ಯ ತಾಳ್ಯುದ್ದ ಇದ್ದರೇನು। ದಾನವಿಲ್ಲದ ಮನೆಯು ದೊಡ್ಡದಾದರೇನು। ಹೀನ ಗುಣವುಳ್ಳವಗೆ ಹಿರಿಯತನ ಬಂದರೇನು। ಶ್ವಾನನ ಮೊಲೆಯೊಳಗೆ ಹಾಲಿದ್ದರೇನು॥1॥ ಹೋಗದೂರಿನ ದಾರಿ ಕೇಳಿ ಮಾಡುವುದೇನು। ಯೋಗಿಯ ಕೂಡ ಪರಿಹಾಸ್ಯವೇನು। ರಾಗದಲಿ ಪುರಂದರವಿಠಲನ್ನ ನೆನೆಯದವ। ಯೋಗಿಯಾದರೇನವನು ಭೋಗಿಯಾದರೇನು॥2॥

**ಯಾರಿಗೆ ಯಾರುಂಟು ಎರವಿನ** **ರಾಗ: ಹಿಂದುಸ್ಥಾನಿಕಾಪಿ, ಆದಿತಾಳ**

ಯಾರಿಗೆ ಯಾರುಂಟು ಎರವಿನ ಸಂಸಾರ। ನೀರಮೇಲಣ ಗುಳ್ಳೆ ನಿಜವಲ್ಲ ಹರಿಯೇ॥ಪ॥ ಬಾಯಾರಿತು ಎಂದು ಬಾವಿನೀರಿಗೆ ಪೋದೆ। ಬಾವಿಲಿ ಜಲ ಬತ್ತಿ ಬರಿದಾಯ್ತು ಹರಿಯೆ॥1॥ ಬಿಸಿಲು ಗಾಳಿಗಾಗಿ ಮರದ ನೆರಳಿಗೆ ಪೋದೆ।

ಮರ ಬಗ್ಗಿ ಶಿರದ ಮೇಲೊರಗಿತೋ ಹರಿಯೆ।।2।। ಅಡವಿಯೊಳ್ಮನೆಮಾಡಿ ಗಿಡಕೆ ತೊಟ್ಟಿಲು ಕಟ್ಟಿ। ತೊಟ್ಟಿಲಿನ ಶಿಶು ಮಾಯವಾಯಿತು ಹರಿಯೆ।।3।। ತಂದೆ ಶ್ರೀ ಪುರಂದರವಿಠಲ ನಾರಾಯಣ। ನಾ ಸಾಯೊ ಹೊತ್ತಿಗೆ ನೀ ಕಾಯೊ ಹರಿಯೇ।।4।।

**ರಾಗಿ ತಂದೀರಾ ಭಿಕ್ಷಕೆ** **ರಾಗ: ಪುನ್ನಾಗವರಾಳಿ, ಆದಿತಾಳ**

ರಾಗಿ ತಂದೀರಾ ಭಿಕ್ಷಕೆ ರಾಗಿ ತಂದೀರಾ।।ಪ।। ಯೋಗ್ಯರಾಗಿ, ಭೋಗ್ಯರಾಗಿ। ಭಾಗ್ಯವಂತರಾಗಿ ನೀವು।।ಅ।। ಅನ್ನದಾನವ ಮಾಡುವರಾಗಿ। ಅನ್ನ ಛತ್ರವನಿಟ್ಟವರಾಗಿ।। ಅನ್ಯ ವಾರ್ತೆಯ ಬಿಟ್ಟವರಾಗಿ। ಅನುದಿನ ಭಜನೆಯ ಮಾಡುವರಾಗಿ।।1।। ಮಾತಾಪಿತೃಗಳ ಸೇವಿಪರಾಗಿ। ಪಾಪ ಕಾರ್ಯವ ಬಿಟ್ಟವರಾಗಿ।ಥ ಜಾತಿಯಲ್ಲಿ ಮಿಗಿಲಾದವ ರಾಗಿ। ನೀತಿ ಮಾರ್ಗದಲಿ ಖ್ಯಾತರಾಗಿ ।।2।। ಗುರು ಕಾರುಣ್ಯವ ಪಡೆದವರಾಗಿ। ಗುರುವಿನ ಮರ್ಮವ ತಿಳಿದವ ರಾಗಿ।। ಗುರುವಿನ ಪಾದವ ಸ್ಮರಿಸುವರಾಗಿ। ಪರಮ ಪುಣ್ಯವ ಮಾಡುವರಾಗಿ।।3।। ಶ್ರೀನಿವಾಸನ ಸ್ಮರಿಸುವರಾಗಿ। ಪ್ರಾಣರಾಯನ ದಾಸರಾಗಿ।। ದಾನಕೆಂದು ಬಲು ಹೆದರಿ ಇಂಥ ದೀನ ವೃತ್ತಿಯಲಿ ಹೀನರಾಗಿ ।।4।। ಪಕ್ಷಮಾಸ ವ್ರತ ಮಾಡುವರಾಗಿ। ಪಕ್ಷಿವಾಹನಗೆ ಪ್ರಿಯರಾಗಿ।। ಕುಕ್ಷಿಲಿ ಕಲ್ಮಷ ಇಲ್ಲದವರಾಗಿ। ಭಿಕ್ಷುಕರಲಿ ಅತಿ ತುಚ್ಛರಾಗಿ।।5।। ವೇದ ಪುರಾಣವ ತಿಳಿದವರಾಗಿ। ಮೇದಿನಿ ಯಾಳುವಂಥವರಾಗಿ।। ಸಾಧು ಧರ್ಮವಾಚರಿಸು ವರಾಗಿ। ಓದಿ ಗ್ರಂಥಗಳ ಪಂಡಿತರಾಗಿ।।6।। ಆರು ಮಾರ್ಗವ ಅರಿತವರಾಗಿ। ಮೂರು ಮಾರ್ಗವ ತಿಳಿದವರಾಗಿ।। ಭೂರಿ ತತ್ತ್ವವ ಬೆರೆದವ ರಾಗಿ। ಕ್ರೂರರ ಸಂಗವ ಬಿಟ್ಟವರಾಗಿ।।7।। ಕಾಮ ಕ್ರೋಧವ ಅಳಿದವರಾಗಿ। ನೇಮ ನಿಷ್ಠೆಗಳ ಮಾಡುವರಾಗಿ।। ಆ ಮಹಾಪದವಿಲಿ ಸುಖಿಸುವರಾಗಿ। ಪ್ರೇಮದಿ ಕುಣಿ ಕುಣಿದಾಡುವರಾಗಿ।।8।। ಸಿರಿ ರಮಣನ ಸದಾ ಸ್ಮರಿಸುವರಾಗಿ। ಗುರುತಿಗೆ ಬಾಹೋರಂಥ ವರಾಗಿ।। ಕರೆಕರೆ ಸಂಸಾರ ನೀಗುವರಾಗಿ। ಪುರಂದರವಿಠಲನ ಸೇವಿಪರಾಗಿ।।9।।

**ರೊಕ್ಕ ಎರಡಕ್ಕು ದುಃಖ** **ರಾಗ: ಹಂಸಧ್ವನಿ, ಅಟತಾಳ**

ರೊಕ್ಕ ಎರಡಕ್ಕು ದುಃಖ ಕಾಣಕ್ಕ।।ಪ।। ಮಕ್ಕಳ ಮರಿಗಳ ಮಾಡೋದು ರೊಕ್ಕ। ಸಕ್ಕರೆ ತುಪ್ಪವ ತಿನಿಸೋದು ರೊಕ್ಕ।। ಕಕ್ಕುಲಾತಿಯನು ಬಿಡಿಸೋದು ರೊಕ್ಕ। ಫಕ್ಕನೆ ಹೋದರೆ ಘಾತ ಕಾಣಕ್ಕ।।1।। ನೆಂಟರ ಇಷ್ಟರ ಮರೆಸೋದು ರೊಕ್ಕ। ಕಂಟಕಗಳ ಪರಿಹರಿಸೋದು ರೊಕ್ಕ। ಗಂಟು ಕಟ್ಟಲಿಕ್ಕೆ ಕಲಿಸೋದು ರೊಕ್ಕ।। ತುಂಟತನಗಳನು ಬಲಿಸೋದು ರೊಕ್ಕ।।2।। ಇಲ್ಲದ ಗುಣಗಳ ತರಿಸೋದು ರೊಕ್ಕ। ಸಲ್ಲದ ನಾಣ್ಯವ ನಡೆಸೋದು ರೊಕ್ಕ। ಬೆಲ್ಲಕ್ಕಿಂತಲು ಬಹು ಸವಿ ರೊಕ್ಕ। ಇಲ್ಲದಿರಲು ಬಹು ದುಃಖ ಕಾಣಕ್ಕ।।3।। ಉಂಟಾದ ಗುಣಗಳ ಮರೆಸೋದು ರೊಕ್ಕ। ಬಂಟರನೆಲ್ಲರ ಬರಿಸೋದು ರೊಕ್ಕ। ಕಂಠಿ ಸರಿಗೆಯನು ಗಳಿಸೋದು ರೊಕ್ಕ। ಒಂಟೆ ಕುದುರೆ ಆನೆ ತರಿಸೋದು ರೊಕ್ಕ।।4।। ವಿದ್ಯದ ಮನುಜರ ಕರೆಸೋದು ರೊಕ್ಕ। ಹೊದ್ದಿದ ಜನರನು ಬಿಡಿಸೋದು ರೊಕ್ಕ। ಮುದ್ದು ಪುರಂದರವಿಠಲನ ಮರೆಸುವ ಬಿದ್ದು ಹೋಗೋ ರೊಕ್ಕವ ಸುಡು ನೀನಕ್ಕ।।5।।

**ಲೊಳಲೊಟ್ಟೆ, ಎಲ್ಲಾ ಲೊಳಲೊಟ್ಟೆ** **ರಾಗ: ಶಂಕರಾಭರಣ, ಅಟತಾಳ**

ಲೊಳಲೊಟ್ಟೆ, ಎಲ್ಲಾ ಲೊಳಲೊಟ್ಟೆ।।ಪ।। ಆನೆ ಕುದುರೆ ಒಂಟೆ ಲೊಳಲೊಟ್ಟೆ, ಬಹು। ಸೇನೆ ಭಂಡಾರವು ಲೊಳಲೊಟ್ಟೆ।। ಮಾನಿನಿಯರ ಸಂಗ ಲೊಳಲೊಟ್ಟೆ। ದೊಡ್ಡ ಕ್ಷೋಣೀಶನೆಂಬುದು ಲೊಳಲೊಟ್ಟೆ।।1।। ಮುತ್ತು ಮಾಣಿಕ್ಯ ಲೊಳಲೊಟ್ಟೆ, ಚಿನ್ನ। ಛತ್ರ ಚಾಮರ ಧ್ವಜ ಲೊಳಲೊಟ್ಟೆ।। ಸುತ್ತಗಲಕೋಟೆ ಲೊಳಲೊಟ್ಟೆ। ಮತ್ತೆ ಉತ್ತಮ ಪ್ರಭುತ್ವ ಲೊಳಲೊಟ್ಟೆ।।2।। ಕಂಟಕರೆಂಬೋರು ಲೊಳಲೊಟ್ಟೆ ನಿನ್ನ। ನೆಂಟರು ಇಷ್ಟರು ಲೊಳಲೊಟ್ಟೆ।। ಉಂಟಾದ ಗುಣನಿಧಿ ಪುರಂದರವಿಠಲನ ಬಂಟನಾಗದವ ಲೊಳಲೊಟ್ಟೆ।।3।।

**ವಾಹವ್ವಾರೆ ಮೆಣಸಿನಕಾಯಿ** **ರಾಗ: ಹಂಸಧ್ವನಿ, ಏಕತಾಳ**

ವಾಹವ್ವಾರೆ ಮೆಣಸಿನಕಾಯಿ। ಒಣ ರೊಟ್ಟಿಗೆ ತಂದೆನೊ ಕಾಯಿ।।ಪ।। ಹುಟ್ಟುತಲಿ ಹಸುರಾಗುತ ಕಂಡೆ। ನಟ್ಟ ನಡುವೆ ಕೆಂಪಾಗುತ ಕಂಡೆ।।ಅ.ಪ.।। ಕಟ್ಟೆ ರಾಯನ ಬಹುರುಚಿ ಎಂಬೆ। ಒಂದೆರಡರೆದರೆ ಬಹುರುಚಿ ಎಂಬೆ। ಮೇಲೆರಡರೆದರೆ ಬಹು ಖಾರೆಂಬೆ। ಮತ್ತೆರಡರೆದರೆ ಅತಿ ಕಾರೆಂಬೆ।।1।। ಬಡವರಿಗೆಲ್ಲಾ ನಿನ್ನಾಧಾರ। ಅಡಿಗೆ ಊಟಕ್ಕೆ ನಿನ್ನ ಸಾರ। ಬಾಯಲಿ ಕಡಿದರೆ ಬೆಂಕಿಯ ಖಾರ। ಪುರಂದರವಿಠಲನ ನೆನೆಯೋದು ಭಾರ।।2।।

**ಸತ್ಯವಂತರಿಗಿದು ಕಾಲವಲ್ಲ** **ರಾಗ: ಭೈರವಿ, ಝಂಪೆತಾಳ**

ಸತ್ಯವಂತರಿಗಿದು ಕಾಲವಲ್ಲ।।ಪ।। ದುಷ್ಟ ಜನರಿಗೆ ಸುಭಿಕ್ಷ ಕಾಲ।।ಅ।। ಹರಿಸ್ಮರಣೆ ಮಾಡುವಗೆ ಕ್ಷಯವಾಗುವ ಕಾಲ। ಪರಮ ಪಾಪಿಗಳಿಗೆ ಸುಭಿಕ್ಷಕಾಲ। ಸ್ಥಿರವಾದ ಪತಿವ್ರತೆಯ ಪರರು ನಿಂದಿಪ ಕಾಲ। ಧರೆಯರಿಯೆ ಜಾರೆಯನು ಕೊಂಡಾಡುವ ಕಾಲ।।1।। ಉಪಕಾರ ಮಾಡಿದರೆ ಅಪಕರಿಸುವ ಕಾಲ। ಸಕಲವನು ತಿಳಿದವಗೆ ದುರ್ಭಿಕ್ಷಕಾಲ। ಸತಿ ಸುತರು ಎಂಬವರ ನಂಬಲರಿಯದ ಕಾಲ। ಸಟೆಯಲ್ಲವಿದು ಬಹು ವಿಪರೀತ ಕಾಲ।।2।। ಧರ್ಮ ಮಾಡುವವ ನಿರ್ಮೂಲವಾಗುವ ಕಾಲ। ಕರ್ಮಿ ಪಾತಕರಿಗೆ ಬಹು ಸೌಖ್ಯಕಾಲ।। ನಿರ್ಮಲಾತ್ಮಕ ಸಿರಿ ಪುರಂದರವಿಠಲನ। ಮರ್ಮದೊಳು ಭಜಿಸಲರಿಯದ ಕಾಲವಯ್ಯ।।3।।

**ಸ್ವರ್ಗ ಮರ್ತ್ಯ ಪಾತಾಳದಲ್ಲಿ (ಸುಳಾದಿ)** **ರಾಗ: ಕಾನಡ**

ಸ್ವರ್ಗಮರ್ತ್ಯ ಪಾತಾಳದಲ್ಲಿ। ತಿರುಗಿ ತಿರುಗಿ ಬಳಲಿದೆನು। ದೇಹಯೋಗವಿಯೋಗ, ಹಮ್ಮು ಮಮತೆಯಿಂದಲಿ ಬಳಲಿದೆನು।।ಪ।। ಯಮನ ಪಟ್ಟಣಕ್ಕೆಂಭತ್ತೆಂಟು ಸಾಸಿರಬಾರಿ। ಹೋಗಿ ಬಂದು ಬಳಲಿದೆನಯ್ಯ ಅಲ್ಲಿ। ಯಮನಾಳ್ಗಳಿಂದ ನೊಂದೆನು ನಾನಲ್ಲಿ। ವೈತರಣಿಯಿಂದ ಬಳಲಿದೆನು ಅಲ್ಲಿ।।1।। ನರಕ ಭಾಜನನಾಗಿ ಹೋದೆನೋ ಪುರಂದರವಿಠಲ। ಇನ್ನಾರೆ ಆರೆನಯ್ಯ ಕರುಣಿಸು ಕರುಣಿಸಯ್ಯ। ಕರುಣಾಕರನೆ ದಮ್ಮಯ್ಯ ದಮ್ಮಯ್ಯ।ಸ್ವರ್ಗ ಮರ್ತ್ಯಪಾತಾಳದಲಿ।।2।।

**ಸತ್ಯವಂತರ ಸಂಗವಿರಲು** **ರಾಗ: ಪೂರ್ವಿಕಲ್ಯಾಣಿ, ರೂಪಕತಾಳ**

ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ।।ಪ।। ನಿತ್ಯ ಜ್ಞಾನಿಯಾದ ಮೇಲೆ ಚಿಂತೆ ಯಾತಕೆ।।ಅ.ಪ.।। ತಾನು ಉಣದೆ ಪರರಿಗಿಕ್ಕದ ಧನವಿದ್ಯಾತಕೆ। ಮಾನಹೀನನಾಗಿಬಾಳ್ವೆ ಮನುಜಗ್ಯಾತಕೆ।। ಜ್ಞಾನವಿಲ್ಲದೇ ನೂರುಕಾಲ ಬದುಕಲ್ಯಾತಕೆ। ಮಾನಿನಿಯ ತೊರೆದ ಮೇಲೆ ಭೋಗವ್ಯಾತಕೆ।।1।। ಮಾತು ಕೇಳದೇ ಮಲೆತು ನಡೆವ ಮಕ್ಕಳ್ಯಾತಕೆ। ಪ್ರೀತಿ ಇಲ್ಲದೇ ಎಡೆಯಲಿಕ್ಕಿದ ಅನ್ನವ್ಯಾತಕೆ।। ನೀತಿ ಅರಿತು ನಡೆಯದಿರುವ ಬಂಟನ್ಯಾತಕೆ। ಸೋತು ಹೆಣ್ಣಿಗೆ ಹೆದರಿ ನಡೆವ ಪುರುಷನ್ಯಾತಕೆ।।2।। ಸನ್ನೆಯರಿತು ನಡೆಯದಿರುವ ಸತಿಯು ಯಾತಕೆ। ಮನ್ನಣೆಂದ ನಡೆಸದಿರುವ ದೊರೆಯು ಯಾತಕೆ।। ಮುನ್ನಕೊಟ್ಟು ಪಡೆಯದ್ದನ್ನು ಬಯಸಲ್ಯಾತಕೆ। ಚನ್ನ ಆದಿಕೇಶವನಿರಲು ದೈವವ್ಯಾತಕೆ।।3।।

**ಸಾಕು ಸಾಕಿನ್ನು ಸಂಸಾರ ಸುಖವು** **ರಾಗ:ಮುಖಾರಿ, ಝಂಪೇತಾಳ**

ಸಾಕು ಸಾಕಿನ್ನು ಸಂಸಾರ ಸುಖವು।।ಪ।। ಶ್ರೀಕಾಂತ ನೀನೊಲಿದು ಕರುಣಿಸೈ ಹರಿಯೆ।।ಅ.ಪ.।। ಉದಿಸಿದವು ಪಂಚಭೂತಗಳಿಂದ ಔಷಧಿ। ಗಳುದಿಸಿದವು ಔಷಧಿಗಳಿಂದನ್ನವು। ಉದಿಸಿದವು ಅನ್ನದಿಂ ಶುಕ್ಲಶೋಣಿಕವೆರಡು। ಉದಿಸಿದವು ಸತಿಪುರುಷ ರೀರ್ವರೊಳು ಹರಿಯೆ।।1।। ಸತಿಪುರುಷರೊಂದಾಗಿ ರತಿಕ್ರೀಡೆಗಳ ಮಾಡೆ। ಪತನವಾದಿಂದ್ರಿಯವೆ ಹೊಲೆ ರಕ್ತವು।। ಋತುಕಾಲದೊಳಗೆರಡು ಏಕತ್ರ ಸಂಧಿಸಲು। ಗತಿಸಿದುದು ಮಾಸ ಒಂದೀರ್ವರೊಳು ಹರಿಯೆ ।।2।। ಮಾಸವೆರಡರಲಿ ಶಿರ। ಮಾಸ ಮೂರರೊಳಂಗ। ಮಾಸ ನಾಲ್ಕರಲಿ ಚರ್ಮದ ಹೊದ್ದಿಕೆ। ಮಾಸವೈದಾರರಲಿ ನಖ ರೋಮ ನವರಂಧ್ರ। ಮಾಸವೇಳರಲಿ ಹಸಿವು ತೃಷೆ ಹರಿಯೆ।।3।। ತಿಂಗಳೆಂಟರಲಿ ಪೂರ್ವಾನುಭವಕರ್ಮಗಳು। ಅಂಗವೆಲ್ಲವ ತಿಳಿದು ಅರಿಕೆಯಿಂದ ಅಂಗನೆಯುದರ

ಕಿನ್ನೆಂದಿಗೂ ಬರೆನೆಂದು। ಹಿಂಗದಲೆ ಧ್ಯಾನಿಸುತ ಕಳೆದೆನೋ। ದಿನವ॥4॥ ಇನಿತು ನವಮಾಸ ಮಲಮೂತ್ರದಾ ಗರ್ಭದಲಿ ಸಿಲುಕಿರಲು ನರಕದಾಯಾಸದೊಳಗೆ। ಘನ ಮರುತ ಯೋಗದಿಂ ನರಳುತಿಲ್ಲಿಗೆ ಬಂದು ಜನಿಸಿ ಮೃತಭಾವದಿಂ ನೊಂದೆನೈ ಹರಿಯೆ॥5॥ ಧರೆಯ ಮೇಲುದಿಸಿ ಶ್ರೀ ವಿಷ್ಣುಮಾಯಕೆ ಸಿಲುಕಿ। ಪರವಶದಿ ಹಸಿದು ನೀರಡಿಸಿ ಬೇಗ॥ ಭರದಿ ಕಣ್ದೆರೆದು ಗೋಳಿಟ್ಟು ಪ್ರಪಂಚವಿದು। ಸ್ಥಿರವೆಂದು ನಂಬಿ ನಾ ಮರುಳಾದೆ ಹರಿಯೆ॥6॥ ಶಿಶುತನದೊಳಿರಲು ನೊಣ ಮುಸುಕಲದರಿಂದಳಲು। ಹಸಿದವನಿವನೆಂದು ಸ್ತನ್ಯವ ಕೊಡುವರು॥ ಹಸಿ ತೃಷೆಗಳಿಂದಲಳಲು ಹಾಡಿ ತೂಗುತಲಿಹರು। ಪಶುವಂತೆ ಶಿಶುತನದೊಳಿರಲಾರೆ ಕೃಷ್ಣ॥7॥ ಬಾಲ್ಯದಲಿ ಕೆಲವು ದಿನ ಬರಿದೆ ಹೋಯಿತು ಹೊತ್ತು। ಮೇಲೆ ಗೋಳಿಟ್ಟು ವಿದ್ಯೆಗಳ ಕಲಿತು॥ ಮೇಲೆ ಯೌವ್ವನ ಬರಲು ತನುಮೂಲವನು ಮರೆತು। ಬಾಲೆಯರ ಬಯಸಿ ನಾ ಮರುಳಾದೆ ಹರಿಯೆ॥8॥ ಜ್ವರದ ಮೇಲೆ ಅತಿಸಾರ ಬಂದೊದಗುವಂದದಲಿ ನಿರತ ಕಾಮಕ್ರೋಧ ವಿಷಯಂಗಳಲಿ। ತರುಣಿಯರಿಗೊಡವೆ ಬಂಗಾರ ಬೇಕೆಂದೆನುತ ಪರಸೇವೆಯೊಳು ನಾನು ಕಡುನೊಂದೆನಯ್ಯ॥9॥ ದಿಟ್ಟತನದಲಿ ಗಳಿಸಿ ತರುವಾಗ ಸತಿಸುತರು। ಕಟ್ಟಿಕೊಂಡಿಹರು ತನು ಬಿಟ್ಟ ಬಳಿಕ॥ ಕುಟ್ಟಿಕೊಂಡಳುತ ಹೋಯೆಂದು ಗೋಳಿಡುತಂಜಿ। ಮುಟ್ಟದೇ ದೂರದಲಿ ನಿಂದಿಹರು ಹರಿಯೆ॥10॥ ಸತ್ತವರಿಗಳಲೇಕೆ ಸುತ್ತ ಬಂಧುಗಳೆಲ್ಲ। ಸ್ವಸ್ಥವಿರಿ ಹೊತ್ತು ಹೋಯಿತು ಎನುತಲಿ॥ ಒತ್ತಿಸಿದ ಕಸಕ್ಕಿಂತ ಅತ್ತಿತ್ತ ಈ ದೇಹ ಹೊತ್ತುಕೊಂಡೊಯ್ದು ಅಗ್ನಿಯಲಿ ಬಿಸುಡುವರು॥11॥ ದೇವನೇ ನಾನಿನ್ನು ಯೋನಿಮಾರ್ಗದ ಒಳಗೆ। ಈ ವಿಧದಿ ಬವಣೆ ಪಡಲಾರೆ ಬಹಳ। ಕಾವ ಕರುಣಿಯೆ ನಮ್ಮ ಪುರಂದರವಿಠಲನೆ ಭಾವ ಭಕುತಿಯಕೊಟ್ಟು ರಕ್ಷಿಸೋ ಹರಿಯೆ॥12॥

**ಸಾಧು ಸಜ್ಜನರೊಳಗಿರುವೋದೆ** **ರಾಗ: ಮೋಹನ, ಆದಿತಾಳ**

ಸಾಧು ಸಜ್ಜನರೊಳಗಿರುವೋದೆ ಹಬ್ಬ। ವೇದಾಂತದರ್ಥವ ತಿಳಿವೋದೆ ಹಬ್ಬ॥1॥ ಭೇದಬುದ್ಧಿಗಳೆಲ್ಲ ಬಿಡುವೋದೆ ಹಬ್ಬ। ಭಾಗೀರಥಿಲಿ ಲೋಲಾಡುವುದೆ ಹಬ್ಬ॥2॥ ಸಂಕಲ್ಪ ಸಿದ್ಧಿ ಮನಕೆ ದೊಡ್ಡ ಹಬ್ಬ। ನಿಶ್ಚಿಂತ ಯೋಗಿಗೆ ಅನುದಿನ ಹಬ್ಬ॥3॥ ಸಾವಿಲ್ಲದವನ ಸಂಸಾರದಿ ಹಬ್ಬ। ಶರೀರಕ್ಕೆ ವ್ಯಾಧಿ ಬಾರದೊಡೆ ಹಬ್ಬ॥4॥ ಸಂಚಿತ ಕರ್ಮವ ಕಳೆವೋದೆ ಹಬ್ಬ। ಪಂಚಮುಖನಾಭನ ಭಜಿಸುವುದೆ ಹಬ್ಬ॥5॥ ಕಂಗಳು ಕಾಶಿಯ ಕಾಂಬೋದೆ ಹಬ್ಬ। ಶ್ರೀ ವಿಶ್ವಪತಿಯ ಭಜಿಸುವುದೆ ಹಬ್ಬ॥6॥ ಭೂಲೋಕದೊಳು ಕಾಶಿವಾಸವೆ ಹಬ್ಬ। ಪುರಂದರವಿಠಲನ್ನ ಭಜಿಸುವುದೆ ಹಬ್ಬ॥7॥

**ಸ್ನಾನ ಮಾಡಿರಯ್ಯ ಜ್ಞಾನತೀರ್ಥದಲಿ** **ರಾಗ: ಪೂರ್ವಿಕಲ್ಯಾಣಿ, ಆದಿತಾಳ**

ಸ್ನಾನ ಮಾಡಿರಯ್ಯ ಜ್ಞಾನತೀರ್ಥದಲಿ। ನಾನು ನೀನೆಂಬಹಂಕಾರವ ಬಿಟ್ಟು॥ಪ॥ ತನ್ನೊಳು ತಾನೆ ತಿಳಿದರೊಂದು ಸ್ನಾನ। ಅನ್ಯಾಯಗಾರಿ ಕಳೆದರೊಂದು ಸ್ನಾನ॥ ಅನ್ಯಾಯವಾಡದಿದ್ದರೊಂದು ಸ್ನಾನ। ಚೆನ್ನಾಗಿ ಹರಿಯ ನೆನೆದರೊಂದು ಸ್ನಾನ॥1॥ ಪರಸತಿಯ ಬಯಸದಿದ್ದರೆ ಒಂದು ಸ್ನಾನ। ಪರನಿಂದೆ ಮಾಡದಿದ್ದರೆ ಒಂದು ಸ್ನಾನ॥ ಪರದ್ರವ್ಯ ಅಪಹರಿಸದಿರೆ ಒಂದು ಸ್ನಾನ। ಪರತತ್ವ ತಿಳಿದುಕೊಂಡರೆ ಒಂದು ಸ್ನಾನ॥2॥ ತಂದೆತಾಯಿಗಳ ಸೇವೆ ಒಂದು ಸ್ನಾನ। ಮುಂದಿನ ಮಾರ್ಗ ತಿಳಿದರೊಂದು ಸ್ನಾನ॥ ಬಂಧನವನು ಬಿಡಿಸಿದರೊಂದು ಸ್ನಾನ। ಸಂಧಿಸಿ ತಿಳಿದುಕೊಂಡರೆ ಸೇತು ಸ್ನಾನ॥3॥ ಅತ್ತೆ ಮಾವನ ಸೇವೆಯೊಂದು ಸ್ನಾನ। ಭರ್ತನ ಮಾತು ಕೇಳುವುದೊಂದು ಸ್ನಾನ॥ ಕ್ಷೇತ್ರಪಾತ್ರರ ಸಹವಾಸ ಒಂದು ಸ್ನಾನ। ಪಾರ್ಥಸಾರಥಿ ನಿಮ್ಮ ಧ್ಯಾನವೆ ಸ್ನಾನ॥4॥ ವೇದಶಾಸ್ತ್ರಗಳನೋದಿದರೊಂದು ಸ್ನಾನ। ಭೇದಾಭೇದ ತಿಳಿದರೊಂದು ಸ್ನಾನ॥ ಸಾಧು ಸಜ್ಜನರ ಸಂಘ ಒಂದು ಸ್ನಾನ। ಪುರಂದರವಿಠಲನ ಧ್ಯಾನವೆ ಸ್ನಾನ॥5॥

**ಸುಖಮಯ ಜೀವನ ಬೇಕು** **ರಾಗ: ಕೇದಾರ, ಆದಿತಾಳ**

ಸುಖಮಯ ಜೀವನ ಬೇಕು। ಅನುಪಮ ಶಾಂತಿಯು ದೊರಕಿಸಬೇಕು॥ಪ॥ ಮಾಧವ ಸೇವೆಲಿ ತೊಡಗಿರಬೇಕು। ಮಾನವ ಧರ್ಮವ ಪಾಲಿಸಬೇಕು। ಸಜ್ಜನ ಸಂಗದಿ ಇರಲು ಬೇಕು। ಹರಿನಾಮ ಸ್ಮರಣೆ ಮಾಡಲು ಬೇಕು॥1॥ ಸಂತತಿ ಸಂಪತಿ ಪಡೆಯಲು ಬೇಕು। ದಾನಧರ್ಮಗಳ ಮಾಡಲು ಬೇಕು। ಅತಿಥಿಸೇವೆಯಲಿ ತೊಡಗಿರಬೇಕು। ಹರಿಸರ್ವೋತ್ತಮ ಎನ್ನಲು ಬೇಕು॥2॥ ಅವಿರತ ದುಡಿಮೆ ಮಾಡಲುಬೇಕು। ಆನಂದ ಕಂದನ ಸ್ಮರಿಸಲು ಬೇಕು। ಜೀವನ ಸಾರ್ಥಕ ಪಡಿಸಲು ಬೇಕು। ಚೈತನ್ಯದಾಸ ಶರಣೆನ್ನಬೇಕು॥3॥

**ಸಂಗವಾಗಲಿ ಸಾಧು** **ರಾಗ : ಶಂಕರಾಭರಣ – ಆದಿತಾಳ**

ಸಂಗವಾಗಲಿ ಸಾಧು ಸಂಗವಾಗಲಿ॥ಪ॥ ಸಂಗದಿಂದ ಲಿಂಗದೇಹ ಭಂಗವಾಗಲಿ॥ಅ.ಪ॥ ಅಚ್ಯುತಾಂಘ್ರಿನಿಷ್ಠರ ಯದೃಚ್ಛಲಾಭತುಷ್ಟರ। ನಿಶ್ಚಯಾತ್ಮ ಜ್ಞಾನವುಳ್ಳ ಅಚ್ಚಭಾಗವತರ॥1॥ ತಂತ್ರಸಾರ ಅಷ್ಟಮಹಾಮಂತ್ರ ಪರಿಪೂರ್ಣ ಸ್ನೇಹ। ಯಂತ್ರದಿಂದ ಬಿಗಿದು ಸ್ವತಂತ್ರ ಮೂರ್ತಿ ತಿಳಿದವರ॥2॥ ಪಂಚಭೇದ ಸಂಸ್ಕಾರ ಪಂಚಭೂತಾತ್ಮವಾದ। ಪ್ರಪಂಚ ಸೂತ್ರ ಪ್ರಸನ್ನ ವೇಂಕಟನ ಪಂಚಬಾಣನಯ್ಯನ॥3॥

**ಹಣವೇ ನಿನ್ನಯ ಗುಣ** **ರಾಗ:ಅಠಾಣ**

ಹಣವೇ ನಿನ್ನಯ ಗುಣ ಎಷ್ಟು ವರ್ಣಿಸಲಿ? ಹಣವಿಲ್ಲದವನೊಬ್ಬ ಹೆಣವೇ ಸರಿ ಕಂಡ್ಯಾ॥ಪ॥ ಬೆಲೆಯಾಗದನ್ನೆಲ್ಲಾ ಬೆಲೆಯ ಮಾಡಿಸುವೇ। ಎಲ್ಲಾ ವಸ್ತುಗಳನ್ನು ನೀನೇ ತರಿಸುವೇ। ಕುಲಕೆಟ್ಟವನ ಸತ್ಕುಲಕೆ ಸೇರಿಸುವೆ॥ಅ.ಪ.॥ ಹೊಲೆಯನಾದರೂ ತಂದು ಮನೆಯ ಸೇರಿಸುವೆ ಹಣವೇ। ಅಂಗನೆಯರ ಸಂಗವ। ನೀನೇ ಮಾಡಿಸುವೇ। ಶೃಂಗಾರ ಆಭರಣಗಳ ನೀನೇ ತರಿಸುವೇ। ಮಂಗನಾದರೂ ಮನ್ಮಥನೆಂದೆನಿಸುವೆ॥ಹಣವೇ... ಕಂಗಳಿಲ್ಲದವಗೇ ಮಗಳ ಕೊಡಿಸುವೇ। ಹಣವೇ॥1॥ ಚರಣಕ್ಕೆ ಬಂದ ಬಂಧನವ ಬಿಡಿಸುವೇ। ಸರ್ವರೊಳಗತಿ ಶ್ರೇಷ್ಠನರನ ಮಾಡಿಸುವೇ। ಅರಿಯಾದ ಶುಂಠನ। ಅರಿತವನೆನಿಸುವೇ॥ ಹಣವೇ...॥ ಸಿರಿ ಹಯವದನನ ಸ್ಮರಣೆ ಮರೆಸುವೆ॥ ಹಣವೇ॥2॥

**ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ** **ರಾಗ: ಪೂರ್ವಿಕಲ್ಯಾಣಿ, ಆದಿತಾಳ**

ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ॥ಪ॥ ಹರಿ ಕೊಡದ ಕಾಲಕ್ಕೆ ಬಾಯಿ ಬಿಡುವೆಯಲ್ಲೊ ಪ್ರಾಣಿ॥ಅ॥ ಹತ್ತು ಸಾವಿರ ಹೊನ್ನು ತಿಪ್ಪೇಲಿ ಹೂಳಿಟ್ಟು। ಮತ್ತೆ ಉಪ್ಪಿಲ್ಲದೆ ಉಂಡೆಯಲ್ಲೊ ಪ್ರಾಣಿ॥ ಹತ್ತು ಸಾವಿರ ಹೊನ್ನು ತಿಪ್ಪೇಲಿ ಪೋಪಾಗ। ಮೃತ್ತಿಕೆ ಬಾಯಲ್ಲಿ ಬಿತ್ತಲ್ಲೊ ಪ್ರಾಣಿ॥1॥ ಹುಗ್ಗಿಯು ತುಪ್ಪವು ಅಗ್ಗವಾಗಿರಲಿಕ್ಕೆ। ಗುಗ್ಗುರಿಯನ್ನವ ತಿಂದ್ಯಲ್ಲೊ ಪ್ರಾಣಿ॥ ಹೆಗ್ಗಳದ ಭಾಗ್ಯವು ಘಳಿಗೇಲಿ ಪೋಪಾಗ। ಬುಗ್ಗೆಯ ಹೊಯ್ಕೊಂಡು ಹೋದೆಯಲ್ಲೊ ಪ್ರಾಣಿ॥2॥ ನೆಂಟರಿಷ್ಟರು ಬಂದು ಮನೆ ಮುಂದೆ ಕುಳಿತರೆ। ಕುಂಟ ಸುದ್ದಿಯನಾಡಿದೆಯಲ್ಲೋ ಪ್ರಾಣಿ॥ ಕಂಟಕ ಯಮನವರು ಕುಂಠಿಸುತ್ತೆಳೆವಾಗ। ನೆಂಟ ಶ್ರೀ ಪುರಂದರವಿಠ್ಠಲನು ಪ್ರಾಣಿ॥3॥

**ಹಣ್ಣು ಬಂದಿದೆ ಕೊಳ್ಳಿರೋ** **ರಾಗ: ಕಲ್ಯಾಣಿ, ಆದಿತಾಳ**

ಹಣ್ಣು ಬಂದಿದೆ ಕೊಳ್ಳಿರೋ, ನೀವೀಗ। ಹಣ್ಣು ಬಂದಿದೆ ಕೊಳ್ಳಿರೋ॥ಪ॥ ಚಿನ್ನ ಬಾಲಕೃಷ್ಣನೆಂಬೊ, ಚೆನ್ನಾದ ಬಾಳೆಯ॥ಅ॥ ಹವ್ಯ ಕವ್ಯದ ಹಣ್ಣು ಸವಿವ ಸಕ್ಕರೆ ಹಣ್ಣು। ಭವರೋಗಗಳನೆಲ್ಲ ಕಳೆವ ಹಣ್ಣು॥ ನವನೀತ ಚೋರನೆಂಬ ಜವನ ಅಂಜಿಪ ಹಣ್ಣು। ಅವನಿಯೊಳು ಶ್ರೀರಾಮನೆಂಬೊ ಹಣ್ಣು॥1॥ ಕೊಳೆತು ಹೋಗುವುದಲ್ಲ। ಹುಳಿತು ಹೋಗುವುದಲ್ಲ। ಕಳೆದು ಬಿಸಾಡಿಸಿಕೊಳುವುದಲ್ಲ। ಅಳತೆ ಕೊಂಬುವುದಲ್ಲ॥ ಗಿಳಿ ಕಚ್ಚಿ ತಿಂಬೋದಲ್ಲ। ಒಳಿತಾದ ಹರಿಯೆಂಬೊ ಮಾವಿನಹಣ್ಣು॥2॥ ಕೆಟ್ಟು ನಾರುವುದಲ್ಲ ಬಿತ್ತಿ ಬೆಳೆಯೋದಲ್ಲ। ಕಷ್ಟದಿ ಹಣ ಕೊಟ್ಟು ಕೊಂಬುವುದಲ್ಲ॥ ಸೃಷ್ಟಿಯೊಳಗೆ ನಮ್ಮ ಪುರಂದರವಿಠ್ಠಲ। ಕೃಷ್ಣರಾಯನೆಂಬೊ ಶ್ರೇಷ್ಠವಾದ ಹಣ್ಣು॥3॥

**ಹರಿ ಚಿತ್ತ ಸತ್ಯ** **ರಾಗ: ಷಣ್ಮುಖಪ್ರಿಯ, ಆದಿತಾಳ**

ಹರಿ ಚಿತ್ತ ಸತ್ಯ ಹರಿ ಚಿತ್ತ॥ಪ॥ ನರ ಚಿತ್ತಕ್ಕೆ ಬಂದದ್ದು ಲವಲೇಶ ನಡೆಯದು॥ಅ॥ ಮಡದಿ ಮಕ್ಕಳ ಭಾಗ್ಯ ಬಯಸೋದು ನರಚಿತ್ತ। ಮದುವ್ಯಾಗದಿರುವುದು ಹರಿಚಿತ್ತವು। ಕುದುರೆ ಅಂದಣ ಆನೆ ಬಯಸೋದು ನರಚಿತ್ತ। ಪದಚಾರಿಯಾಗೋದು ಹರಿಚಿತ್ತವಯ್ಯ॥1॥ ವಿಧವಿಧ ಯಾತ್ರೆಯ ಬಯಸೋದು ನರಚಿತ್ತ। ಒದಗಿಬರುವ ರೋಗ ಹರಿಚಿತ್ತವು। ಸದಾ ಅನ್ನದಾನವ ಬಯಸೋದು ನರಚಿತ್ತ। ಹಸಿದು ಅಳುವುದು ಹರಿಚಿತ್ತವಯ್ಯ॥2॥ ಧರಣಿಯನಾಳ

ಬೇಕೆಂಬುದು ನರಚಿತ್ತ ಪರರ ಸೇವಿಸುವುದು ಹರಿ ಚಿತ್ತವು। ಪುರಂದರವಿಠಲನ ಬಯಸೋದು ನರಚಿತ್ತ। ದುರಿತವ ಕಳೆವುದೆ ಹರಿಚಿತ್ತವಯ್ಯ।।3।।

**ಹರಿಯಧಿಕ ಹರನಧಿಕನೆಂದು** **ರಾಗ:ಕಾಂಭೋಧಿ, ಝಂಪೆತಾಳ**

ಹರಿಯಧಿಕ ಹರನಧಿಕನೆಂದು ಬಡೆದಾಡದಿರಿ। ಹರಿಹರ ಭಕುತರೇ ಇದಕೆ ಸಾಕ್ಷಿ।।ಪ।। ಹರಿಯ ಬಾಗಿಲ ಕಾಯ್ದು ಬಲಿ ಭಾಗ್ಯವಂತನಾದ। ಹರನ ಬಾಗಿಲ ಕಾಯ್ದು ಬಾಣನಳಿದ। ಹರಿಯೊಲಿದು ಭೀಮನಿಗೆ ಪರಿಪೂರ್ಣ ವರವಿತ್ತ। ಹರನೊಲಿದು ಜರಾಸಂಧ ಹತನಾದು ದರಿಯ।।1।। ಹರಿಯ ನೆನೆದು ಪ್ರಹ್ಲಾದ ಬಂದ ದುರಿತವ ಗೆದ್ದ। ಹರನ ನೆನೆದವನ ಪಿತ ಹತನಾದನು। ಹರಿಯ ನೆನೆದು ವಿಭೀಷಣ ಪರಿಪೂರ್ಣ ವರಪಡೆದ। ಹರನ ವರ ಪಡೆದ ರಾವಣ ಹತನಾದುದರಿಯ।।2।। ಹರನ ವರ ಪಡೆದ ಭಸ್ಮಾಸುರನು ಗರ್ವದಲಿ। ಹರನ ಶಿರದಲಿ ಕರವಿಡಲು ಬರಲು। ಹರಿ ನೀನೆ ಗತಿಯೆಂದು ತ್ರಿಪುರಾರಿ ಮೊರೆಯಿಡಲು। ವರದ ಪುರಂದರ ವಿಠಲ ಕಾಯ್ದುದನರಿಯ।।3।।

**ಹೆತ್ತ ತಂದೆತಾಯಿಗಳ ಚಿತ್ತವ** **ರಾಗ: ಹಿಂದೋಳ, ಆದಿತಾಳ**

ಹೆತ್ತ ತಂದೆತಾಯಿಗಳ ಚಿತ್ತವ ನೋಯಿಸಿ। ನಿತ್ಯ ದಾನವ ಮಾಡಿ ಫಲವೇನು।। ಸತ್ಯ ಸದಾಚಾರ ಇಲ್ಲದವನು ಜಪ। ಹತ್ತು ಸಾವಿರ ಮಾಡಿ ಫಲವೇನು।।1।। ತನ್ನ ಸತಿಸುತರು ಬಂಧುಗಳ ನೋಯಿಸಿ। ಚಿನ್ನ ದಾನವ ಮಾಡಿ ಫಲವೇನು। ಬಿನ್ನಣದಿಂದಲಿ ದೇಶದೇಶವ ತಿರುಗಿ। ಅನ್ನದಾನವ ಮಾಡಿ ಫಲವೇನು।।2।। ಗೌಪ್ಯ ಗುಣ ಗುಟ್ಟು ಇಲ್ಲದ ಹೆಣ್ಣಿಗೆ ರೂಪ ಯವ್ವನವಿದ್ದು ಫಲವೇನು। ತಾಪತ್ರಯದಿ ಸಂಸಾರ ಕೆಡಿಸುವಂಥ। ಪಾಪಿ ಮಗನು ಇದ್ದು ಫಲವೇನು।।3।। ತಾಂಡವ ಧನದಿಂದ ತಂದೆ ಮಾತು ಕೇಳದ। ತೊಂಡ ಮಗನು ಇದ್ದು ಫಲವೇನು।। ಭಂಡು ಮಾಡಿ ಅತ್ತೆ ಮಾವನ ಬೈವ। ಪುಂಡು ಸೊಸೆಯಿದ್ದು ಫಲವೇನು।।4।। ಸ್ನಾನಕ್ಕೆ ಪಾನಕ್ಕೆ ಆಗುವ ತಿಳಿನೀರು। ಕಾನನದೊಳಗಿದ್ದು ಫಲವೇನು।। ಆನಂದಮೂರುತಿ ಪುರಂದರವಿಠಲನ ನೆನೆಯದ ತನುವಿದ್ದು ಫಲವೇನು।।5।।

**ಧರ್ಮಕ್ಕೆ ಕೈ ಬಾರದೀ ಕಾಲ** **ರಾಗ: ಪೂರ್ವಿಕಲ್ಯಾಣಿ, ಆಟ್ಟತಾಳ**

ಧರ್ಮಕ್ಕೆ ಕೈ ಬಾರದೀ ಕಾಲ। ಪಾಪ ಕರ್ಮಕ್ಕೆ ಮನಸೋಲೋದೀ ಕಾಲ।।ಪ।। ದಂಡ ದ್ರೋಹಕೆ ಉಂಟು। ಪುಂಡುಪೋಕರಿಗುಂಟು। ಹೆಂಡತಿ ಮಕ್ಕಳಿಗಿಲ್ಲವೀಕಾಲ।। ದಿಂಡೇರಿ ಗುಂಟು। ಜಗಭಂಡರಿಗುಂಟು। ಅಂಡಲೆವರಿಗಿಲ್ಲವೀ ಕಾಲ।।1।। ಮತ್ತೆ ಕಳ್ಳರಿಗುಂಟು। ನಿತ್ಯ ಹಾದರಕುಂಟು। ಉತ್ತಮರಿಗಿಲ್ಲವೀಕಾಲ।। ತೊತ್ತೆರಿಗುಂಟು ತಾಟಕಿಗುಂಟು। ಹೆತ್ತ ತಾಯಿಗಿಲ್ಲವೀ ಕಾಲ।।2।। ಹುಸಿದಿಟವಾಯಿತು। ರಸಕಸವಾಯಿತು। ಸೊಸೆ ಅತ್ತೆ ದಂಡಿಸೋದೀ ಕಾಲ।। ಬಿಸಜಾಕ್ಷ ಪುರಂದರ ವಿಠಲನ ಮನದಲ್ಲಿ। ಸ್ತುತಿಸುವವರಿಗಿಲ್ಲ ವೀ ಕಾಲ।।3।।

**ಸಿರಿಯು ಸತಿ ಸುತ ಹಿತರು** **ರಾಗ: ಸಾವೇರಿ**

ಸಿರಿಯು ಸತಿ ಸುತ ಹಿತರು ನಿಜವೆಂದು ನೆರೆನಂಬಿ। ಬರಿದೆ ಮೈಮರೆದು ಕೆಡದಿರು ಮನುಜಾ।।ಪ।। ಒಂದು ಮರದೊಳಗಖಿಲ ಪಕ್ಷಿಗಳು ಕೊಂಬೆಯೊಳು ಹೊಂದಿ। ಬೆಳಗಾಗಲು ಪೋಗುವಂತೆ। ತಂದೆ ತಾಯಣ್ಣ ತಮ್ಮಂದಿರು ಸತಿಸುತರು। ಕಾಲ ಬಂದ ನಿಮಿಷಕ್ಕೆ ನಿಮಗೆ ಹೇಳಲೈದುವರು।।1।। ನಿನ್ನಂಗಕ್ಕಿಂತ ನಿನ್ನಗಿನ್ನು ಹಿತವಾವುದೈ। ನಿನ್ನಂಗವೇ ನಿನ್ನನಗಲುವುದು ಎನಲು। ಅನ್ಯದಾ ಸಿರಿಯು ಸತಿಸುತರುಗಳು ನಿಜವೆಂದು ಇನ್ನಿದನು ತಿಳಿದು ಮೋಹಿಸದಿರು ಮರುಳೇ।।2।। ಸುರಚಾಪ ಗಂಧರ್ವ ಪುರಗಳಿಂ ಪುಸಿಯಾದ। ಸಿರಿ ಮುಖ್ಯ ಪರಿಕರವೇ ಮೈ ಮರೆಯದೇ। ಗುರುಸಿದ್ಧನಂಘ್ರಿ ಪಂಕಜವ ಮನದೊಳು ಭಜಿಸಿ ಸ್ಥಿರ ಮುಕ್ತಿ ಯನು ಪಡೆದು ಸುಖಿಯಾಗು ಮನವೇ।।3।।

## ಭಕ್ತಿಗೀತೆ

**ಕಪ್ಪು ಎನ್ನಲಿ ಬೇಡವೇ** **ರಾಗ:ಕಲ್ಯಾಣಿ, ಆದಿತಾಳ**

ಕಪ್ಪು ಎನ್ನಲಿ ಬೇಡವೇ ರಂಗಯ್ಯನ ಕಪ್ಪು ಎನ್ನಲಿ ಬೇಡವೆ॥ಪ॥ ಕಪ್ಪು ಎನ್ನಲಿ ಬೇಡ ಕರಿಕುರುಳಯ್ಯನ ತಪ್ಪದೆ ಸಲಹುವ ಗುರುರಂಗ ಧಾಮನಾ॥ಅ.ಪ॥ ಹರಿ ಮಧ್ಯದಲಿ ಕಪ್ಪು ಹಾಲ ಹರವಿ ಕಪ್ಪು। ವರ ಮಹಿಷವು ಕಪ್ಪು ಪಾರಾವಾರವೆ ಕಪ್ಪು। ವರ ರಾಘವನೆ ಕಪ್ಪು ಕಾಮಿನಿ ಜಡೆಕಪ್ಪು। ಮೂರು ಲೋಕದಿ ನಮ್ಮ ಮುದ್ದು ಶ್ರೀ ಕೃಷ್ಣ ಕಪ್ಪು॥1॥ ಹರನ ಕಂಠವೆ ಕಪ್ಪು ಭಾರಧ್ವಾಜವೆ ಕಪ್ಪು। ಎರೆಯ ಭೂಮಿಯು ಕಪ್ಪು ಎಸೆವೊ ಕಸ್ತೂರಿ ಕಪ್ಪು। ವರ ಕೋಗಿಲೆ ಕಪ್ಪು ಗುಲಗಂಜಿ ಶಿರ ಕಪ್ಪು। ಮೂರು ಲೋಕದಿ ನಮ್ಮ ಮುದ್ದು ಶ್ರೀ ಕೃಷ್ಣ ಕಪ್ಪು॥2॥ ಸಾಲಿಗ್ರಾಮವೆ ಕಪ್ಪು ಸರಸಿಜ ಬವರಿ ಕಪ್ಪು। ಹೇರಂಬ ಮದಧಾರೆ ಕಪ್ಪು। ಕಾಳಿಂದಿ ಜಲವೆ ಕಪ್ಪು। ಕಾಮಿನಿಯರ ಕರಿಮಣಿಸರವೇ ಕಪ್ಪು। ಮೂರುಲೋಕದಿ ನಮ್ಮ ಮುದ್ದು ಕೃಷ್ಣ ಕಪ್ಪು॥3।

**ಪುಣ್ಯಕ್ಷೇತ್ರವ ಸ್ಮರಿಸಿ ಧನ್ಯರಾಗಿ**

ಪುಣ್ಯಕ್ಷೇತ್ರವ ಸ್ಮರಿಸಿ ಧನ್ಯರಾಗಿ ಪುಣ್ಯಕ್ಷೇತ್ರವ ಸ್ಮರಿಸಿ ಧನ್ಯರಾದೆವು ನಾವು ಮುನ್ನೆ ಮಿಕ್ಕಾದ ಮಹಾನ್ಯಾಯಗಳ ಮರೆತು ಅರಣ್ಯದಲಿ ಬರುತಿರೆ। ಅಜ್ಞಾನರಣ್ಯವನು ಜಯಿಸುವುದು ಕಾಶೀ ಪ್ರಯಾಗ ಗಯವು॥1॥ ಶೇಷಪರ್ವತವು ಗರುಡಾದ್ರಿ ಶ್ರೀಶೈಲಪ್ರಭಾಕ್ಷೇತ್ರವು ಮೊದಲೆ ಗೋಕುಲ ವೃಂದಾವನನಾಶ್ರೀತ ತ್ರಿಯಂಬಕ ಮುದಗಲ್ ಕ್ಷೇತ್ರವುಪರಾಶರಾಮಗನಾಶ್ರಮ॥2॥ ದೋಷದಲಿ ತೋತಾದ್ರಿ ಕುಂಭಕೋಣ, ವಾರಣಾಸಿ ಭಾರದ್ವಾಜಾ ಕ್ಷೇತ್ರ ಅರುಣಾಚಲ ಮಹಾದೋಶ ವರ್ಜಿತವಿಲ್ಲಿ ಕಾರುಣ್ಯ ಹರಿ ನಿಜವೊಲಿವ ಧರ್ಭಶಯನ (ರಾಮೇಶ್ವರ) ಮಧ್ವಾಚಲ॥3॥ ಸುಂದರ ಚರಾಚರ ಜಂಬುಕೇಚರ ಮಹಾನಂದಿ ಚಿದಂಬರ ವೀರರಾಘವ ದೇವ ಕಂದನಿತ್ತ ಸ್ವಾಮಿ ಕಾರ್ತವೀರ್ಯ ಬಹುಶೇಷ ಆನಂದ ಏಕಾಂಬರೀಶ॥4॥ ಅಂದವಾದಕ್ಷಯ ಅಳಕಾಪುರೀಕ್ಷೇತ್ರ ಒಂದೊಂದು ಕೋಟೀಶ್ವರ ಶ್ರೀರಂಗ ಹಸ್ತಗಿರಿಪಾಂಡುರಂಗಾ ಕ್ಷೇತ್ರ ದ್ವಾರಕಾ ಸಿಂಹಾದ್ರಿ ನೀಲಕಂಠನಿಧೇ ಚಾರುಗಯೆ ಚಂಪಕಾ ಗಜಾರಣ್ಯ ಪಂಪಾಕ್ಷೇತ್ರ (ಹಂಪೆ) ವೀರನಾರಾಯಣ ಹೋ॥5॥ ಕಾರುಣ್ಯ ಮಾಳ್ಪ ರಾಮರನಗರಿ ಮಾಯಾರೂ ಕೇದಾರ ಕುರುಕ್ಷೇತ್ರ ಮತ್ತೆ ತಲಾರಂಗ ನಿಧೇ ಸಾರಿದರು ಪರಮ ಪುರುಷೋತ್ತಮ ಪುಷ್ಕರ ಕ್ಷೇತ್ರ ದ್ವಾರಕಾಪುರಿ ಜಗನ್ನಾಥ ಎಡತೊರೆಯು ರಾಮನಾಥಪುರವು॥6॥ ಕಾವೇರಿ ಉದ್ಭವಾದಿಯ ಅನಂತ ವಲ್ಕಲ ಕ್ಷೇತ್ರ ಪದ್ಮನಾಭ ಪುರುಷೋತ್ತಮ ಪುಷ್ಕರ ಕ್ಷೇತ್ರ ಸಜ್ಜೇಂದ್ರ ಕರ್ಣಕಮರಿ ಮಧುರೆ ಅಳಗಿರಿ ತಿಮ್ಮ ಬೇಲೂರು ಚೆನ್ನಿಗ ಮುದದಿಂದ ಓಂ ಕಾಳಹಸ್ತಿ ಕುರಳೀನಾಥ ಕದಿರೆಯಾ ನರಸಿಂಹ ಕರವೀರಕ್ಷೇತ್ರವು ವಿಶಾಲ ವಿಹಂಗ ಭುಜಂಗ ಕ್ಷೇತ್ರವು॥7॥ ಶಂಕರನಾರಾಯಣ ರುಂತೂರು ಗೋಕರಣ ಸಂಕರ್ಷಣಾ ಕ್ಷೇತ್ರಗೋಹತಿ ಸೇತುವನ ಶಂಕಮುಖಿ ಗಜೇಂದ್ರ ಮೋಕ್ಷ (ತಲಕಾಡು) ಗಜಾರಣ್ಯಂ ಅಹಂಕಾರ ಮುಕ್ತದೇವ॥8॥ ಇಂತು ಪಾವನಪುಣ್ಯ ಸೇತುಗಿರಿ ನೀಲಾದ್ರಿ ಅನಂತಗಿರಿ ಮಳಲೂರ ಅಪ್ರಮಹಿಮಾ ಸ್ವಾಮಿ ಅಂತಕನ ಗೆದ್ದ ಪುರಿ ತೀರ್ಥ ನಿವಾರೋಕ್ಷಿ ಕುಂತಿಮಾದಿ ಶ್ರೀರಂಗವು ದೇಶದ ಒಳಗೆಲ್ಲಾ। ಪುಣ್ಯಕ್ಷೇತ್ರಗಳೆಲ್ಲಾ ಎಣಿಸಿ ಪೇಳಲಿಕ್ಕು ಯಾರಿಗೂ ಅಳವಿಲ್ಲ॥9॥ ಪ್ರಾತಃಕಾಲದಲ್ಲಿ ಪ್ರದೋಶಕಾಲದಲ್ಲಿ ಸ್ಮರಿಸೋರು ಮಾನವರು ಕನಸಿನ ಮನಸಿನ ದೋಷ ವಿಮೋಚನಾ ವಿಜಯ ವಿಠಲಗೊಲಿದು ಇಹಪರಕೆ ಸದ್ಗತಿಯಾ ಕುಲಕೋಟಿ ಪಾವನವು ಸ್ವಾಮಿ ಪುಣ್ಯ ಕ್ಷೇತ್ರವ ಸ್ಮರಿಸಿ ಧನ್ಯರಾಗಿ॥10॥

## ವಚನ

**ಅರಿಯದವರೊಡನೆ ಸಂಗವ** **ರಾಗ: ಹಿಂದೋಳ**

ಅರಿಯದವರೊಡನೆ ಸಂಗವ ಮಾಡಿದರೆ। ಕಲ್ಲು ಹೊಯ್ದು ಕಿಡಿಯ ತೆಗೆದುಕೊಂಬಂತೆ। ಬಲ್ಲವರೊಡನೆ ಸಂಗವ

ಮಾಡಿದರೆ। ಮೊಸರ ಹೊಸೆದು ಬೆಣ್ಣೆಯ ತೆಗೆದುಕೊಂಬಂತೆ। ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣರ ಸಂಗ ಕರ್ಪೂರಗಿರಿಯ ಉರಿಯ ಕೊಂಡಂತೆ॥

**ಅಲರೊಳಡಗಿದ್ದ ಪರಿಮಳದಂತೆ**

ಅಲರೊಳಡಗಿದ್ದ ಪರಿಮಳದಂತೆ ಪತಂಗದೊಳಗಿನ ಅನಲನಂತೆ। ಶಶಿಯೊಳಗಿನ ಷೋಡಶ ಕಳೆಯಂತೆ। ಉಲುಹಡಗಿದ ವಾಯುವಿನಂತೆ। ಸಿಡಿಲೊಡಗಿದ ಗಾತ್ರದ ತೇಜದಂತೆ। ಇರಬೇಕಯ್ಯಾ ಯೋಗ, ಎನ್ನ ಅಜಗಣ್ಣ ತಂದೆಯಂತೆ॥1॥ ನುಡಿಯಲು ಬಾರದು ಕೆಟ್ಟನುಡಿಗಳ। ನಡೆಯಲು ಬಾರದು ಕೆಟ್ಟನಡೆಗಳ। ನುಡಿದೊಡೇನು ನುಡಿಯದಿರ್ದೊಡೇನು? ಹಿಡಿದ ವ್ರತ ಬಿಡದಿರಲು ಅದೇ ಮಹಾಜ್ಞಾನದಾಚರಣೆ ಎಂಬೆನು ಅಜಗಣ್ಣ ತಂದೆ॥2॥

**ಆಸೆಯೆಂಬುದು ಅರಸಿಂಗಲ್ಲದೆ**

ಆಸೆಯೆಂಬುದು ಅರಸಿಂಗಲ್ಲದೆ। ಶಿವಭಕ್ತರಿಗುಂಟೆ ಅಯ್ಯ। ಈಸಕ್ಕಿಯಾಸೆ ನಿಮಗೇಕೆ? ಈಶ್ವರನೊಪ್ಪ। ಮಾರಯ್ಯಪ್ರಭು ಅಮರೇಶ್ವರಲಿಂಗಕ್ಕೆ ದೂರಮಾರಯ್ಯ॥

**ಇವನಾರವ್ವ2 ಎಂದೆನಿಸದಿರಯ್ಯ** **ರಾಗ: ಮೋಹನ, ಆದಿತಾಳ**

ಇವನಾರವ್ವ ಇವನಾರವ್ವ ಎಂದೆನಿಸದಿರಯ್ಯ। ಇವನಮ್ಮವ ಇವನಮ್ಮವ ಇವನಮ್ಮವ ಎಂದೆನಿಸಯ್ಯ ಅಯ್ಯ। ಕೂಡಲ ಸಂಗಮ ದೇವ ನಿಮ್ಮ ಮನೆಯ ಮಗನೆಂದೆನಿಸಯ್ಯ ಅಯ್ಯ।

**ಉರಿವ ಕೆಂಡದ ಮೇಲೆ ತೃಣವ** **ರಾಗ: ಅಠಾಣ**

ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದರೆ। ಆ ತೃಣವ ಕೆಂಡ ನುಂಗಿದಂತೆ। ಗುರುಚರಣದ ಮೇಲೆ ತನುತೃಣವ ನಿಳುಹಿದರೆ। ಆತನ ಸರ್ವಾಂಗವೆಲ್ಲಾ ಲಿಂಗ ಕಾಣಾರಾಮನಾಥ॥

**ಉದಯಾಸ್ತಮಾನವೆಂಬ** **ರಾಗ: ಭೌಳಿ**

ಉದಯಾಸ್ತಮಾನವೆಂಬ ಕೊಳಗದಲ್ಲಿ ಆಯುಷ್ಯವೆಂಬ। ರಾಸಿಯನಳೆವರು। ರಾಸಿ ತೀರದ ಮುನ್ನ। ಸಟೆಯ ಸಡಗರವ ಬಿಟ್ಟು। ಶಿವಲಿಂಗಾರ್ಚನೆಯ ಮಾಡುವುದು। ಕೂಡಲ ಚೆನ್ನ ಸಂಗಯ್ಯ। ಇದ ಮಾಡದಿರ್ದಡೆ ನಾಕನರಕ॥

**ಎತ್ತಣ ಮಾಮರ** **ರಾಗ: ದುರ್ಗ**

ಎತ್ತಣ ಮಾಮರ ಎತ್ತಣ ಕೋಗಿಲೆ ಎತ್ತಣಿಂದೆತ್ತ ಸಂಬಂಧವಯ್ಯಾ॥ಪ॥ ಬೆಟ್ಟದ ನೆಲ್ಲಿಕಾಯಿ ಸಮುದ್ರದ ಉಪ್ಪು ಎತ್ತಣಿಂದೆತ್ತ ಸಂಬಂಧವಯ್ಯ॥1॥ ಗುಹೇಶ್ವರ ಲಿಂಗಕ್ಕೂ ಎನಗೂ ನಿನಗೂ ಎತ್ತಣಿಂದೆತ್ತ ಸಂಬಂಧವಯ್ಯ॥2॥

**ಎಂಥಾ ಸೋಜಿಗವಾಯಿತೆಲೆ** **ರಾಗ: ಕುಂತಲವರಾಳಿ, ಆದಿತಾಳ**

ಎಂಥಾ ಸೋಜಿಗವಾಯಿತೆಲೆ ಕಾಂತೆ। ಇದರಂತಸ್ಥವನು ಪೇಳಿ ಮತಿವಂತೆ॥ಪ॥। ಸೊಳ್ಳೆಯೊಂದಾನೆಯ ತಿಂದಿತು। ಕೋಳಿಪಿಳ್ಳೆಯು ಗರುಡನ ಕೊಂದಿತು। ಜಳ್ಳು ಬೀಜವು ಮೊಳಕೆದ್ದಿತು। ದೊಡ್ಡ ಕೊಳ್ಳಿಯು ತಣ್ಣಗಿದ್ದಿತು॥1॥ ಇಲಿಯೊಂದು ಬೆಕ್ಕನು ಹಿಡಿದಿತ್ತು। ಚಿಕ್ಕ ಮೊಲ ನಾರು ನಾಯ್ಗಳ ಕಡಿದಿತ್ತು। ಹುಲಿಯು ಗೋವನು ಕಂಡು ನಡುಗಿತ್ತು। ಅದು ಸಲೆಗುರು ಸಿದ್ಧನೊಳಡಗಿತ್ತು॥2॥

**ಎತ್ತನೇರಿ ಎತ್ತನರಸುವನಂತೆ**

ಎತ್ತನೇರಿ ಎತ್ತನರಸುವನಂತೆ। ತಾನಿರ್ದು ತನ್ನನರಸಿ ಕೇಳುವನಂತೆ। ಹೊತ್ತ ನಿಜವನರಿಯದತ್ತಲಿತ್ತ ಸುತ್ತಿ ಬಳಲುವನಂತೆ। ಹಿಡಿದಿರ್ದ ಲಿಂಗವ ಕಾಣದೆ ಮೂವಿಧಿಗಾಣ್ಬರನೇನೆಂಬೆನಯ್ಯಾ। ಅಜ್ಞಾನಬದ್ಧರೆನಗೆ ತೋರದಿರಯ್ಯಾ ಸೌರಾಷ್ಟ್ರ ಸೋಮೇಶ್ವರಾ॥1॥ ಮುತ್ತು ನೀರೊಳಗೆ ಹುಟ್ಟಿ ಮರಳಿ ನೀರಾಗದಂತೆ। ತಿಳಿಯ ಕಾಸಿದ ತುಪ್ಪ ಕ್ಷೀರವಾಗದಂತೆ।

ತೊಟ್ಟು ಬಿಟ್ಟ ಹಣ್ಣು ಹೂಮಿಡಿಯಾಗದಂತೆ। ಸಂಸಾರದಲ್ಲಿ ಹುಟ್ಟಿ ಅದಹೊದ್ದದೆ। ಸ್ವಯಂಪ್ರಕಾಶ ಲಿಂಗದ ಬೆಳಗಿನಲ್ಲಿ ಬೆಳೆದು। ತಲ್ಲೀನವಾಗಿರ್ದರಯ್ಯಾ। ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರು।।2।।

**ಕಲ್ಲ ನಾಗರ ಕಂಡರೆ** **ರಾಗ: ಮೋಹನ, ಆದಿತಾಳ**

ಕಲ್ಲ ನಾಗರ ಕಂಡರೆ ಹಾಲನೆರೆ ಎಂಬರು। ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ। ಉಂಬ ಜಂಗಮ ಬಂದರೆ ನಡೆ ಎಂಬರು। ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯ। ನಮ್ಮ ಕೂಡಲ ಸಂಗನ ಶರಣರ ಕಂಡು। ಉದಾಸೀನವ ಮಾಡಿದರೆ। ಕಲ್ಲತಾಗಿದ ಮಿಟ್ಟೆಯಂತ ಪ್ಪರಯ್ಯ।।

**ಕಾಗೆಯ ಮರಿ ಕೋಗಿಲೆಯಾಗಬಲ್ಲುದೆ**

ಕಾಗೆಯ ಮರಿ ಕೋಗಿಲೆಯಾಗಬಲ್ಲುದೆ? ಆಡಿನ ಮರಿ ಆನೆಯಾಗ ಬಲ್ಲುದೆ? ಸೀಳುನಾಯಿ ಸಿಂಹದ ಮರಿಯಾಗ ಬಲ್ಲುದೆ? ಅರಿವು ಆಚಾರ ಸಮ್ಯಜ್ಞಾನವರಿಯದೆ ನಾಮವ ಹೊತ್ತುಕೊಂಡು ತಿರುಗುವ ಗಾವಿಲರ ಮುಖವ ನೋಡಲಾಗದು ಅಮುಗೇಶ್ವರ।।

**ಕಾದ ಹಾಲ ನೊಣ ಮುಟ್ಟಬಲ್ಲುದೆ**

ಕಾದ ಹಾಲ ನೊಣ ಮುಟ್ಟಬಲ್ಲುದೆ? ಕಿಚ್ಚಿ ನೊಳಗಣ ಗುಂಡ ಬೆಕ್ಕು ಮುಟ್ಟ ಬಲ್ಲುದೆ? ಮರುಜವಣಿಯ ಕಡ್ಡಿ ಕಯ್ಯಲಿದ್ದವಂಗೆ ಸರ್ಪ ಕಡಿಯ ಬಲ್ಲುದೆ? ಈ ತ್ರಿವಿಧನರಿದವಂಗೆ ಹಿಂದೆ ಶಂಕೆಯಿಲ್ಲ, ಮುಂದೆ ಭೀತಿಯಿಲ್ಲ। ಕಳಂಕು ಇಲ್ಲದೆ ಅಮುಗೇಶ್ವರ ಲಿಂಗವು ಅಪ್ಪಿಕೊಂಡಿತ್ತು।।

**ಕರಿಯನಿತ್ತೆಡೆ ಒಲ್ಲೆ** **ರಾಗ: ಸಾರಂಗ**

ಕರಿಯನಿತ್ತೆಡೆ ಒಲ್ಲೆ। ಸಿರಿಯನಿತ್ತೆಡೆ ಒಲ್ಲೆ। ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ। ನಿಮ್ಮ ಶರಣರ ಸೂಳ್ನುಡಿಯನೊಂದರೆಗಳಿಗೆಯಿತ್ತಡೆ। ನಿಮ್ಮನಿತ್ತೆ ಕಾಣಾ ರಾಮನಾಥ।।

**ಕೃತಯುಗದಲ್ಲಿ ಶ್ರೀಗುರು** **ರಾಗ:ಹಿಂದೋಳ, ಆದಿತಾಳ**

ಕೃತಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದರೆ। ಆಗಲಿ ಮಹಾ ಪ್ರಸಾದವೆಂದನಯ್ಯ। ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದರೆ। ಆಗಲಿ ಮಹಾ ಪ್ರಸಾದವೆಂದನಯ್ಯಾ। ದ್ವಾಪರದಲ್ಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದರೆ। ಆಗಲಿ ಮಹಾ ಪ್ರಸಾದವೆಂದನಯ್ಯಾ। ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ। ಆಗಲಿ ಮಹಾ ಪ್ರಸಾದವೆಂದನಯ್ಯಾ। ಗುಹೇಶ್ವರ ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ಬೆರಗಾದೆನು।

**ಗರ್ವದಿಂದ ಮಾಡುವ ಭಕ್ತಿ** **ರಾಗ:ಬಾಗೇಶ್ರೀ, ಛಾಪುತಾಳ**

ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು। ನಡೆಯಿಲ್ಲದ ನುಡಿ ಅರಿವಿಂಗೆ ಹಾನಿ।।ಪ।। ಕೊಡದೆ ತ್ಯಾಗಿ ಎನಿಸಿಕೊಂಬುದು ಮುಡಿಯಿಲ್ಲದ ಶೃಂಗಾರ। ದೃಢವಿಲ್ಲದ ಭಕ್ತಿ ಅಡಿ ಒಡೆದ ಕುಂಭದಲ್ಲಿ ಸುಜಲವ ತುಂಬಿದಂತೆ ಮಾರಯ್ಯಾಪ್ರಿಯ ಅಮರೇಶ್ವರ ಲಿಂಗವ ಮುಟ್ಟದ ಭಕ್ತಿ।।

**ಗಾಳಿ ಬಿಟ್ಟಲ್ಲಿ ತೂರಿಕೊಳ್ಳಿರಯ್ಯ**

ಗಾಳಿ ಬಿಟ್ಟಲ್ಲಿ ತೂರಿಕೊಳ್ಳಿರಯ್ಯ। ಗಾಳಿ ನಿನ್ನಾಧೀನವಲ್ಲಯ್ಯ। ನಾಳೆ ತೂರುವೆನೆಂದೆಡೆಯಿಲ್ಲಯ್ಯ। ಶಿವಶರಣ ಎಂಬುದೊಂದೇ ಗಾಳಿ ಬಿಟ್ಟಲ್ಲಿ। ಬೇಗ ತೂರೆಂದ ಅಂಬಿಗರ ಚೌಡಯ್ಯ।।

**ಗಂಧ ವೃಕ್ಷವ ಕಡಿದಲ್ಲಿ ನೊಂದೆನೆಂದು** **ರಾಗ: ಆನಂದಭೈರವಿ**

ಗಂಧ ವೃಕ್ಷವ ಕಡಿದಲ್ಲಿ ನೊಂದೆನೆಂದು ಗಂಧವ ಬಿಟ್ಟಿತ್ತೆ ಅಯ್ಯಾ। ಚಂದಸುವರ್ಣವ ತಂದು ಕಾಸಿಬಡಿದಡೆ ನೊಂದೆನೆಂದು ಕಳಂಕ ಹಿಡಿಯಿತ್ತೆ ಅಯ್ಯಾ। ಸಂದುಸಂದು ಕಡಿದ ಕಬ್ಬು ಯಂತ್ರದಲ್ಲಿಟ್ಟು ತಿರುಹಿ ಕಾಸಿದಡೆ ನೊಂದೆನೆಂದು ಸಿಹಿಯಾಗುವುದು ಬಿಟ್ಟೀತ್ತೆ ಅಯ್ಯಾ। ತಂದು ತಂದು ಭವಕಟ್ಟಿ ಬಿಟ್ಟೆಡೆ ನಿಮ್ಮರಿವು ಬಿಟ್ಟೆನೆ ಅಯ್ಯಾ। ಕಪಿಲಸಿದ್ಧಮಲ್ಲಿಕಾರ್ಜುನ॥

**ಚಕೋರಂಗೆ ಚಂದ್ರಮನ** **ರಾಗ: ರೇವತಿ**

ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ। ಅಂಬುಜಕೆ ಭಾನುವಿನ ಉದಯದ ಚಿಂತೆ। ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ। ಎನಗೆ ನಮ್ಮ ಕೂಡಲಸಂಗನ ಶರಣರ ನೆನೆವುದೆ ಚಿಂತೆ॥

**ಚಂದ್ರೋದಯಕೆ ಅಂಬುಧಿ** **ರಾಗ: ಷಣ್ಮುಖಪ್ರಿಯ, ಆದಿತಾಳ**

ಚಂದ್ರೋದಯಕೆ ಅಂಬುಧಿ ಹೆಚ್ಚುವುದಯ್ಯಾ। ಚಂದ್ರ ಕುಂದೆ ಕುಂದುವುದಯ್ಯ। ಚಂದ್ರಂಗೆ ರಾಹು ಅಡ್ಡ ಬಂದಲ್ಲಿ। ಅಂಬುಧಿ ಬೊಬ್ಬಿಟ್ಟಿತೇ ಅಯ್ಯಾ। ಅಂಬುಧಿಯ ಮುನಿ ಆಪೋಷನವ ಕೊಂಡಲ್ಲಿ। ಚಂದ್ರಮನಡ್ಡ ಬಂದನೇ ಅಯ್ಯ। ಆರಿಗಾರೂ ಇಲ್ಲ-ಕೆಟ್ಟವಂಗೆ ಕೆಳೆಯಿಲ್ಲ। ಜಗದಗಂಡ ನೀನೆ ಅಯ್ಯಾ ಕೂಡಲ ಸಂಗಮದೇವ॥

**ಚಂದ್ರಕರ ಕಿರೀಟ ಪಾಹಿ ಗಣೇಂದ್ರ** **ರಾಗ: ಮಾಯಾಮಾಳವ ಗೌಳ, ಆದಿತಾಳ**

ಚಂದ್ರಕರ ಕಿರೀಟ ಪಾಹಿ ಗಣೇಂದ್ರ ನಿಗಮ ಘೋಟ॥ಪ॥ ಸಾಂದ್ರ ಸುಗುಣ ವರ ಮಂದ್ರಯ ಶೋಂಕ। ಮಹೇಂದ್ರ ಮುಖ್ಯ ದಿವಿಜೇಂದ್ರ ಸದಾರ್ಚಿತ॥ಅ.ಪ.॥ ಕಮಲನಯನ ಬಾಣ। ದಾನವ ಸಮರ ಜಯಧುರೀಣ। ಅಮರ ವಿಟವೀ ಮಧು। ಸುಮಕಲಾಪ ಮದ। ಶಮನ ಮದನತನು। ಕಮಲವ ನದ್ವಿಪ॥1॥ ಶರಣ ಜನನಿವಾಸ। ವಿಚಲಿತ ಸರಸ ಮಧುರ ಹಾಸ। ತರುಣ ತಪನಲ ಸದಗುಣ ಜಟಾಧರ। ನಿರುಪಮಾನ ಗುರುಸಿದ್ಧ ಗುರೂಪಮ॥2॥

**ಚಿಲಿಮಿಲಿ ಎಂದೋಡುವ** **ರಾಗ: ಮಾಂಡ್**

ಚಿಲಿಮಿಲಿ ಎಂದೋಡುವ ಗಿಳಿಗಳಿರಾ। ನೀವು ಕಾಣಿರೇ? ನೀವು ಕಾಣಿರೇ? ಸರವರದೊಳ ಗಾಡುವ ಹಂಸಗಳಿರಾ। ನೀವು ಕಾಣಿರೇ? ನೀವು ಕಾಣಿರೇ? ಸರವೆತ್ತಿ ಪಾಡುವ ಕೋಗಿಲೆಗಳಿರಾ । ನೀವು ಕಾಣಿರೇ? ನೀವು ಕಾಣಿರೇ? ಎರಗಿ ಬಂದಾಡುವ ತುಂಬಿಗಳಿರಾ। ನೀವು ಕಾಣಿರೇ? ನೀವು ಕಾಣಿರೇ? ಗಿರಿಗಹ್ವರದೊಳಾಡುವ ನವಿಲುಗಳಿರಾ। ನೀವು ಕಾಣಿರೇ? ನೀವು ಕಾಣಿರೇ? ಚೆನ್ನಮಲ್ಲಿಕಾರ್ಜುನ ದೇವನೆಲ್ಲಿದ್ದಾನೆಂಬುದ ಬಲ್ಲಡೆ ನೀವು ಹೇಳಿರೇ?

**ಛಲಬೇಕು ಶರಣಂಗೆ** **ರಾಗ: ದೇಶ್, ಝಂಪೆತಾಳ**

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ। ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ। ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ। ಛಲಬೇಕು ಶರಣಂಗೆ ಲಿಂಗಜಂಗಮ ವೊಂದೆಂಬ। ಛಲಬೇಕು ಶರಣಂಗೆ ಪರವಾದಿನಿ ಗ್ರಹದಲಿ। ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ। ಛಲವಿಲ್ಲದವರ ಮೆಚ್ಚಕೂಡಲಸಂಗಮ ದೇವ॥

**ಜ್ಯೋತಿ ಬೆಳಗುತಿದೆ ವಿಮಲ** **ರಾಗ: ಬಿಲಹರಿ, ಆದಿತಾಳ**

ಜ್ಯೋತಿ ಬೆಳಗುತಿದೆ। ವಿಮಲ ಪರಂಜ್ಯೋತಿ ಬೆಳಗುತಿದೆ। ಮಾತು ಮನಂಗಳಿಂದತ್ತತ್ತ ಮೀರಿದ ಸಾತಿಶಯದ ನಿರುಪಾಧಿಕ ನಿರ್ಮಲ॥ಪ॥ ಶಿವಧರ್ಮನಾಳವೆಂತೆಂಬ ಕಂಭದ ಮೇಲೆ। ಸುವಿವೇಕ ಹೃದಯಾಬ್ಜ ಪಣತೆಯೊಳು। ಸವೆಯದ ಸದ್ಭಕ್ತಿ ರಸತೈಲ ತೀವಿದ। ಪ್ರವಿಮಲ ಕಳೆಯೆಂಬ ಬತ್ತಿ ವಿಡಿದು ದಿವ್ಯ॥1॥ ಮುಸುಕಿದ ವಿಷಯ ಪತಂಗ ಬಿದ್ದುರುಳೆ ತಾ। ಮಸಬುದ್ಧಿಯೆಂಬ ಕತ್ತಲೆಯಳಿಯೆ। ಮುಸಗಿ ಸುಜ್ಞಾನವೆಂತೆಂಬ ಮಹಾ ಪ್ರಭೆ। ಪಸರಿಸಿ ಮಾಯಾಕಾಳಿಕ ಪೋರ್ದನುಪಮ॥2॥ ಪ್ರಣವಾಕಾರದ ಗುಣ ಮೂರು ಮುಟ್ಟದ। ಗಣಗೆಗತೀತಾರ್ಥವನೆ ತೋರುವ। ಅಣುಮಾತ್ರ ಚಲನೆಯಿಲ್ಲದ। ಮೋಕ್ಷಾಚಿಂತಾಮಣಿಯೆನಿಸುವ ಶಂಭುಲಿಂಗವೇ ತಾನಾದ॥3॥

**ತನಗೆ ಮುನಿದವರಿಗೆ ತಾ** **ರಾಗ: ಅಭೇರಿ, ಛಾಪುತಾಳ**

ತನಗೆ ಮುನಿದವರಿಗೆ ತಾ ಮುನಿಯಲೇಕಯ್ಯ? ತನಗಾದ ಆಗೇನು? ಅವರಿಗಾದ ಚೇಗೇನು? ತನುವಿನ ಕೋಪ ತನ್ನ ಹಿರಿತನದ ಕೇಡು। ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ ನೆರೆಮನೆಯ ಸುಡದು ಕೂಡಲಸಂಗಮ ದೇವಾ॥1॥

**ತನು ಕರಗದವರಲ್ಲಿ ಮಜ್ಜನವ** **ರಾಗ: ಸಾರಂಗ, ಆದಿತಾಳ**

ತನು ಕರಗದವರಲ್ಲಿ ಮಜ್ಜನವ ನೊಲ್ಲೆಯಯ್ಯಾ ನೀನು। ಮನಕರಗದವರಲ್ಲಿ ಪುಷ್ಪವನೊಲ್ಲೆಯಯ್ಯಾ ನೀನು। ಹುದುಳಿಗರಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯಾ ನೀನು। ಅರಿವು ಕಣ್ದೆರೆಯದವರಲ್ಲಿ ಆರುತಿಯನೊಲ್ಲೆಯಯ್ಯಾ ನೀನು। ಭಾವಶುದ್ಧವಿಲ್ಲದವರಲ್ಲಿ ಧೂಪವನೊಲ್ಲೆಯಯ್ಯಾ ನೀನು॥ ಪರಿಣಾಮಿಗಳಲ್ಲದವರಲ್ಲಿ ನೈವೇದ್ಯವ ನೊಲ್ಲೆಯಯ್ಯಾ ನೀನು। ಹೃದಯ ಕಮಲಅರಳದವರಲ್ಲಿ ತಾಂಬೂಲವ ಕೊಳ್ಳಯಯ್ಯಾ ನೀನು। ಇರಲೊಲ್ಲೆಯಯ್ಯಾ ನೀನು। ಎನ್ನಲ್ಲಿ ಏನುಂಟೆಂದು ಕರಸ್ಥಲವನಾನಿಂಬುಗೊಂಡೆ। ಹೇಳಾ ಚೆನ್ನಮಲ್ಲಿಕಾರ್ಜುನಯ್ಯಾ॥

**ತಾ ಮಾಡಿದ ಹೆಣ್ಣು ತನ್ನ** **ರಾಗ: ಬೇಹಾಗ್**

ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು। ತಾ ಮಾಡಿದ ಹೆಣ್ಣು ತನ್ನ ತೊಡೊಯನೇರಿತ್ತು। ತಾ ಮಾಡಿದ ಹೆಣ್ಣು ತನ್ನ ಬ್ರಹ್ಮನ ನಾಲಗೆಯೇರಿತ್ತು। ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು॥

**ತೆರಣಿಯ ಹುಳು ತನ್ನ** **ರಾಗ: ಯಮುನಾಕಲ್ಯಾಣಿ, ತಾಳ**

ತೆರಣಿಯ ಹುಳು ತನ್ನ ಸ್ನೇಹದಲಿ ಮನೆಯಮಾಡಿ। ತನ್ನ ನೂಲು ತನ್ನ ಸುತ್ತಿ। ಸಾವತೆರನಂತೆ ಆಯ್ಯ। ಮನಬಂದುದಾ ಬಯಸಿ ಬೇಯುತ್ತಿದ್ದೇನೆ ಅಯ್ಯ। ಎನ್ನ ಮನದ ನಿರಾಶೆಯ ನಿವಾರಿಸಿ ನಿಮ್ಮತ್ತ ತೋರಾ। ಚೆನ್ನಮಲ್ಲಿಕಾರ್ಜುನಯ್ಯ॥

**ತೇರುಸಾಗಿತಮ್ಮ ನೋಡಿರೇ** **ರಾಗ: ಹಂಸಧ್ವನಿ, ರೂಪಕತಾಳ**

ತೇರುಸಾಗಿತಮ್ಮ ನೋಡಿರೇ। ಈ ದೇಹವೆಂಬ ತೇರುಸಾಗಿತಮ್ಮ। ನೋಡಿರೆ ತೇರು ಸಾಗಿತಮ್ಮ ನೋಡಿರೆ। ಸಾರಮುಕುತಿ ಸತಿಯರೆಲ್ಲ। ಪಾರಮಾರ್ಥ ತತ್ವದೊಳು। ವಿಚಾರವೆಂಬ ಬೀದಿಯೊಳಗೆ॥ಪ॥ ಕಾಲೆರಡು ಗಾಲಿಯಾಗಿವೆ। ಜಂಘೆಗಳವಕ್ಕೆ ಕೀಲಿನಚ್ಚಿನಂತೆ ತೋರಿವೇ। ಈ ತೊಡೆಗಳೆರಡು ಮೇಲುಮುಖದ ಕಂಭವಾಗಿವೇ। ಆಧಾರ ಮುಖ್ಯ ವೇಳು ಚಕ್ರವೆಸೆವ ತನ್ನೊಳೇಳು। ನೆಲೆಗಳಾಗಲದರ ಮೇಲೆ ತೋರ್ಪ। ಮಸ್ತಕ ವಿಲೋಲರತ್ನ ಕಲಶವೆನಿಸಿ॥1॥ ಕರಗಳೆರಡು ಮದನ ತೋಳ್ಗಳು। ಮೇಲಿರುವ ಭುಜದ ಶಿರಗಳೆರಡು। ಹೊಳೆವ ಧ್ವಜಗಳು ನೇತ್ರಂಗಳೆರಡು। ಮೆರೆವ ನೀಲ ದರ್ಪಣಂಗಳು। ಪ್ರಜ್ವಲಿಸುತಿರ್ಪ ಶರೀರಕಾಂತಿಯದಕೆ। ಸುತ್ತಲಿರುವ ಪಟಗಳಾಗಿ ತೋರೆ। ನೆರೆ ಸುಷುಮ್ನ ನಾಡಿಯೆಂಬ। ಬರಿಯ ಬಲದ ಬಿಗುಹಿನಿಂದ॥2॥ ತನುಗುಣಂಗಳೆಲ್ಲ ಪ್ರಜೆಗಳು ಮುಂಬರಿವ ಬುದ್ಧಿ। ಮನಗಳೆಂಬುವೆರಡು ಮಿಳಿಗಳು। ವೈಖರಿಯ ನುಡಿಗಳಿನಿತುವೆಲ್ಲ ವಾದ್ಯರವಗಳು। ಸಂಭ್ರಮದಿ ಬಂದು ಮಿನುಪ ಹೃದಯ ಕಮಲವೆಂಬ। ಕನಕ ಪೀಠದಗ್ರದಲ್ಲಿ ಚಿನುಮಯಾತ್ಮ। ಶ್ರೀಗುರುಸಿದ್ಧನನುವಿನಿಂದೆ ಮೂರ್ತಿಗೊಳಲು॥3॥

**ತಂದೆ ನೀನು ತಾಯಿ ನೀನು** **ರಾಗ: ಶಿವರಂಜಿನಿ**

ತಂದೆ ನೀನು ತಾಯಿ ನೀನು। ಬಂಧು ನೀನು। ಬಳಗ ನೀನು। ನೀನಲ್ಲದೆ ಮತ್ತಾರಯ್ಯ। ಹಾಲಲ್ಲದ್ದು ನೀರಲ್ಲದ್ದು। ನೀನಲ್ಲದೆ ಮತ್ತಾರಯ್ಯ ಕೂಡಲಸಂಗಮ ದೇವಯ್ಯ॥

**ನುಡಿಯಲು ಬಾರದು**

ನುಡಿಯಲು ಬಾರದು ಕೆಟ್ಟ ನುಡಿಗಳ। ನಡೆಯಲು ಬಾರದು ಕೆಟ್ಟ ನಡೆಗಳ। ನುಡಿದೊಡೇನು ನುಡಿಯದಿರ್ದೊಡೇನು? ಹಿಡಿದ ವ್ರತ ಬಿಡದಿರಲು ಅದೇ ಮಹಾಜ್ಞಾನದಾಚರಣೆ ಎಂಬೆನು ಅಜಗಣ್ಣ ತಂದೆ॥

**ನಾಳೆ ಬಪ್ಪುದು ನಮಗಿಂದೇ ಬರಲಿ** **ರಾಗ: ಪೂರ್ವೀಕಲ್ಯಾಣಿ**

ನಾಳೆ ಬಪ್ಪುದು ನಮಗಿಂದೇ ಬರಲಿ। ಇಂದು ಬಪ್ಪುದು ನಮಗೀಗಲೇ ಬರಲಿ। ಇದಕಾರಂಜುವರು? ಇದಕಾರಳುಕುವರು? "ಜಾತಸ್ಯ ಮರಣಂ ಧ್ರುವಂ" ಎಂಬುದಾಗಿ। ನಮ್ಮ ಕೂಡಲಸಂಗಮ ದೇವರು ಬರೆದ ಬರಹವ ತಪ್ಪಿಸುವರೆ। ಹರಿ ಬ್ರಹ್ಮಾದಿಗಳಿಗಳವಲ್ಲಾ॥

**ನಿನ್ನ ನಾನೇನು ಬೇಡಲಿ** **ರಾಗ: ಕಲ್ಯಾಣಿ, ತ್ರಿಶ್ರರೂಪತಾಳ**

ನಿನ್ನ ನಾನೇನು ಬೇಡಲಿ ದೇವ ಕೊಡಲೇನು ನಿನ್ನೊಳೇನುಂಟು ಅದೆಲ್ಲವ ನಾನೆ ತಿಳಿದು॥ಪ॥ ಅಶನವನು ಬೇಡುವೆನೆ ಕಾಲಕೂಟವು ದೇವ। ವಸನವನು ಬೇಡುವೆನೆ ಸೆಡೆದಾನೆದೊಗಳು। ಹೊಸ ಭೂಷಣವ ಬೇಡುವೆನೆ ಭೀಕರಾಹಿಗಳು। ಮಿಸುಪಗಂಧವ ಬೇಡುವೆನೆ ಹೆಣದ ಬೂದಿ।1॥ ತುರುಗವನು ಬೇಡುವೆನೆ ಬಹುದಿನದಿ ಮುದಿ ಎತ್ತು। ಕರದ ಪಾತ್ರೆಯನು ಬೇಡುವೆನೆ ತಲೆಯೋಡು। ಅರಮನೆಯ ಬೇಡುವೆನೆ ಪಿತೃವನ ಭೂಮಿ। ಪರಿಚಾರಕರ ಬೇಡುವೆನೆ ಭೂತಗಳು॥2॥ ನಿನ್ನ ಸಗುಣದ ಸಿರಿಯಿದಿಂತು ಭಿಕ್ಷಾವೃತ್ತಿ। ನಿನ್ನ ನಿರ್ಗುಣ ಸುಖವ ನೋಡೆ ಕೇವಲವು। ಇನ್ನಿದೊಂದನು ಬೇಡೆ ಎನಗೆ ನಿನ್ನಯ ಭಕ್ತಿಯನು। ಕರುಣಿಸಿ ಸಲಹು ಗುರುಸಿದ್ಧರೂಪ॥3॥

**ನಿದ್ರೆಬಾರದು ಎನ್ನ ಪರಿಭವ** **ರಾಗ: ಭೌಳಿ, ತ್ರಿಶ್ರರೂಪಕತಾಳ**

ನಿದ್ರೆಬಾರದು ಎನ್ನ ಪರಿಭವ ದುಃಖ। ಸಮುದ್ರವೆನಿಸುವ ಸಾಯಸವ ನೆನೆ ನೆನೆದು॥ಪ॥ ಪಾಪಾನು ಗುಣದಿಂದೆ ಗಿಡಮರ। ಕ್ರಿಮಿಗಳ ರೂಪಾಗಿ ಕೀಟಕ ಪತಂಗಾದಿಯಾಗಿ। ಆ ಪಕ್ಷಿಕುಲವಾಗಿ ಮೃಗ ಜಾತಿಯಾಗಿ। ಮೇಲಾಪಶುರೂಪಾಗಿ ಬಹುಬಾಧೆ ಕೇಳಿ॥1॥ ಬಾಲಕ ತರುಣ ಜರಾಜೀರ್ಣ ರೂಪಾಗಿ। ಮೇಲೆ ನರಕಿಯಾಗಿ ಬಳಿಕೀಕ್ರಮದೊಳು। ತಾಳಲಾರೆನು ತನುವ ಶ್ರೀಶುಂಭುಲಿಂಗವೆ। ಪಾಲಿಸೆಂದೆರಗಿ ಭಿನ್ನೈಪೆ ಭೀತಿಯೊಳು॥2॥

**ನೀನೊಲಿದರೆ ಕೊರಡು** **ರಾಗ: ಜೋಗಿಯಾ, ತ್ರಿತಾಳ**

ನೀನೊಲಿದರೆ ಕೊರಡು ಕೊನರುವುದು। ನೀನೊಲಿದರೆ ಬರಡು ಹಯನಹುದು। ನೀನೊಲಿದರೆ ವಿಷ ಅಮೃತವಹುದು। ನೀನೊಲಿದರೆ ಸಕಲ ಪಡಿಪದಾರ್ಥಗಳು ಇದಿರಲ್ಲಿಪ್ಪವು ಕೂಡಲಸಂಗಮ ದೇವಾ॥

**ಬಡತನಕೆ ಉಂಬುವ ಚಿಂತೆ** **ರಾಗ : ಮೋಹನ, ಛಾಪುತಾಳ**

ಬಡತನಕೆ ಉಂಬುವ ಚಿಂತೆ। ಉಣಲಾದರೆ ಉಡುವ ಚಿಂತೆ। ಉಡಲಾದರೆ ಇಡುವ ಚಿಂತೆ। ಇಡಲಾದರೆ ಹೆಂಡಿರ ಚಿಂತೆ। ಹೆಂಡಿರಾದರೆ ಮಕ್ಕಳ ಚಿಂತೆ। ಮಕ್ಕಳಾದರೆ ಬದುಕಿನ ಚಿಂತೆ। ಬದುಕಾದರೆ ಕೇಡಿನ ಚಿಂತೆ। ಕೇಡಾದರೆ ಮರಣದ ಚಿಂತೆ। ಇಂತೀ ಹಲವು ಚಿಂತೆಯಲ್ಲಿ ಇಪ್ಪವರ ಕಂಡೆನು। ಶಿವನ ಚಿಂತೆಯಲ್ಲಿದ್ದವರೊಬ್ಬರನೂ ಕಾಣೆನೆಂದಾತ। ನಮ್ಮ ಅಂಬಿಗರ ಚೌಡಯ್ಯ (ನಿಜ) ಶರಣನು॥2॥

**ಬೆರೆಯಬಾರದೆ ತಿಳಿದು** **ರಾಗ: ಮಣಿರಂಗು, ರೂಪಕತಾಳ**

ಬೆರೆಯಬಾರದೆ ತಿಳಿದು ಬೆರೆಯಬಾರದೆ। ಮರೆದು ಬಾಹ್ಯವನ್ನು ತನ್ನ ಕರದಖಂಡ ತೇಜದೊಡನೆ॥ಪ॥ ತಿಳಿವೆನಿಸುವ ಸುರಭಿಗೂಡಿ ನಳನಳಿಸುವ ವಿಕಚಹೃದಯ। ನಳಿನದಮಲ ಕರ್ಣಿಕೆಯೊಳು। ಬೆಳಗುವಿಷ್ಟ ಲಿಂಗದೊಡನೆ॥1॥ ಪರಿವಗಂಗೆ ಯಮುನೆ ಎರಡು ಬೆರೆವ ಸಂಗಮ। ಸ್ಥಳದೊಳಗಿರುವ ಗಗನ ಗಿರಿಯ ತುದಿಯೊಳಿರುವ। ಪ್ರಾಣ ಲಿಂಗದೊಡನೆ॥2॥ ಮಹಿತ ಶ್ರೀಗುರು ಸಿದ್ಧನೊಲಿದು। ವಿಹರಿಸುವ ಸುಷುಮ್ನನಾಡಿ। ಕುಹರದಗ್ರದಚಲ ಸರಸಿರುಹದ। ಭಾವ ಲಿಂಗದೊಡನೆ॥3॥

**ಮಜ್ಜನಕ್ಕೆರೆದು ಫಲವ ಬೇಡುವರಯ್ಯಾ** **ರಾಗ: ಶುಭಪಂತುವರಾಳಿ**

ಮಜ್ಜನಕ್ಕೆರೆದು ಫಲವ ಬೇಡುವರಯ್ಯಾ। ತಮಗೆಲ್ಲಿಯದೋ ಆ ಫಲವು ಸೀತಾಳಕ್ಕಲ್ಲದೆ? ಪತ್ರೆ ಪುಷ್ಪದಲ್ಲಿ ಪೂಜಿಸಿ ಫಲವ ಬೇಡುವರಯ್ಯ। ತಮಗೆಲ್ಲಿಯದೋ ಆ ಫಲವು ಗಿಡುಗಳಿಗಲ್ಲದೆ? ಸಯಿದಾನವನರ್ಪಿಸಿ ಪ್ರಸಾದದ ಫಲವ ಬೇಡುವರಯ್ಯ। ತಮಗೆಲ್ಲಿಯದೋ ಆ ಫಲವು ಹದಿನೆಂಟು ಧ್ಯಾನಕ್ಕಲ್ಲದೆ? ಲಿಂಗದೊಡವೆಯ ಲಿಂಗಕ್ಕೆ ಕೊಟ್ಟು, ಫಲವ ಬೇಡುವ। ಸರ್ವನ್ಯಾಯಿಗಳನೇನೆಂಬೆ ಗುಹೇಶ್ವರಾ॥

**ಮನೆಯೊಳಗೆ ಮನೆಯೊಡೆಯ** **ರಾಗ: ರೇವತಿ**

ಮನೆಯೊಳಗೆ ಮನೆಯೊಡೆಯ ಇದ್ದಾನೊ ಇಲ್ಲವೊ। ಹೊಸಿಲೊಳಗೆ ಹುಲ್ಲು ಹುಟ್ಟಿ। ಮನೆಯೊಳಗೆ ರಜತುಂಬಿ। ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ। ತನುವಿನೊಳಗೆ ಹುಸಿ ತುಂಬಿ। ಮನದೊಳಗೆ ವಿಷಯ ತುಂಬಿ। ಮನೆಯೊಳಗೆ ಮನೆಯೊಡಯನಿಲ್ಲ। ಕೂಡಲಸಂಗಮದೇವ॥

**ಮುತ್ತು ಕಂಡೆನವ್ವ ತಂಗಿ** **ರಾಗ: ದೇಶ್, ತಾಳ**

ಮುತ್ತು ಕಂಡೆನವ್ವ ತಂಗಿ ನಾನೊಂದು ಮೂಗಿನಲಿರುವುದ ನತ್ತೊಂದಾ। ಒಂದು ವರ್ಣದ ಮುತ್ತು ಓ ನಾಮದೊಳಗಿತ್ತು। ಎರಡು ವರ್ಣದ ಮುತ್ತು ಎಡಬಲದೊಳಗಿತ್ತು। ಮೂರು ವರ್ಣದ ಮುತ್ತು ಮೂಲಸ್ಥಾನ ದೊಳಿತ್ತು। ನಾಲ್ಕು ವರ್ಣದ ಮುತ್ತು ನಾಗೇಶನಲ್ಲಿತ್ತು। ಐದು ವರ್ಣದ ಮುತ್ತು ಐಕ್ಯಸ್ಥಾನದಲ್ಲಿತ್ತು। ಆರು ವರ್ಣದ ಮುತ್ತು ಆರೂಢ ಸ್ವಾಮಿಗೆ ಗೊತ್ತು। ಏಳು ವರ್ಣದ ಮುತ್ತು ಯೋಗೇಶನಲ್ಲಿತ್ತು। ಎಂಟು ವರ್ಣದ ಮುತ್ತು ಮಂಟಪ ದಲ್ಲಿತ್ತು। ಒಂಭತ್ತು ವರ್ಣದ ಮುತ್ತು ತುಂಬಿತುಳುಕಾಡುತ್ತಿತ್ತು। ಹತ್ತು ವರ್ಣದ ಮುತ್ತು ತತ್ವ ಬಲ್ಲವಗೆ ಗೊತ್ತು.

**ಯೋಗಿಯಲ್ಲವೇ ಗುಪ್ತ** **ರಾಗ: ಷಣ್ಮುಖಪ್ರಿಯ, ರೂಪಕತಾಳ**

ಯೋಗಿಯಲ್ಲವೇ ಗುಪ್ತ ಯೋಗಿಯಲ್ಲವೇ। ಮೇಗಣಖಿಳಮುದ್ರೆಗಳ ಸರಾಗ ಮೊಳಗೆ ತಳೆದ ಗೃಹಿಯೆ॥ಪ॥ ಶಮೆಯೆನಿಪ್ಪ ಕಚ್ಚೆಗಟ್ಟಿ ಶಾಂತಿಯಂತರೀಯ ಉಟ್ಟು। ದಮೆಯೆನಿಪ್ಪ ಕಾವಿಯಂಬರವನು ವೇಷ್ಟಿಸಿ। ಮಮತೆಯೆಂಬ ಮನೆಯ ಬಿಟ್ಟು ಮಾಯೆಎಂಬ ಸತಿಯನಳಿದು। ಸಮತೆಯೆಂಬುವಾಶ್ರಮವ ಹೊಂದಿ ರಮಿಸುತಿರ್ಪಗೃಹಿಯೆ॥1॥ ವಿರತಿಯೆಂಬ ಭಸಿತ ತೊಡೆದು ಹರುಷವೆಂಬ ಪಾತ್ರೆಗೊಂಡು। ಗುರುಸುಖೋಕ್ತಿಯೆಂಬ ಕುಂಡಲಗಳ ಭೂಷಿಸಿ। ಅರಿವೆನಿಪ್ಪದಂಡವಿಡಿದು ಕರುಣಯೋಗವಟ್ಟವಾಂತು। ದುರಿತ ಪುಣ್ಯವೆಂಬ ಪಾದುಕೆಗಳ ಮೆಟ್ಟಿನಿಂದ ಗೃಹಿಯೆ॥2॥ ಸತ್ತೆನಿಪ್ಪ ಭಿಕ್ಷೆಯುಂಡು ಚಿತ್ತೆನಿಪ್ಪ ಜಲವ ನೀಂಟಿ। ತತ್ವವಿವರವೆಂಬ ದೇಶಗಳನುಚರಿಸುತೆ। ಚಿತ್ತವೆಂಬ ಗುಹೆಯೊಳೊರಗಿ ನಿತ್ಯಸುಖದೆ ನಿದ್ರೆಗೈಯ್ದು। ಮತ್ತೆ ಭವವ ಪೂರ್ವವಳಿದು ಶ್ರೀ ಗುರುಸಿದ್ಧನೆನಿಪ ಗೃಹಿಯೆ॥3॥

**ಸರ್ವಜ್ಞನ ವಚನಗಳು** **ರಾಗ: ರಾಗಮಾಲಿಕೆ**

ಒಬ್ಬನಲ್ಲದೆ ಜಗಕೆ ಇಬ್ಬರುಂಟೇ ಮತ್ತೆ ಒಬ್ಬ ಸರ್ವಜ್ಞ ಕರ್ತನು ಜಗಕೆಲ್ಲ। ಒಬ್ಬನೆದೈವ ಸರ್ವಜ್ಞ ॥1॥ ಆನೆ ನೀರಾಟದೊಳು ಮೀನುಕಂಡಂಜುವುದೆ। ಹೀನ ಮನದವರ ಬಿರುನುಡಿಗೆ ತತ್ವದ ಜ್ಞಾನಿಯಂಜುವನೆ ಸರ್ವಜ್ಞ॥2॥ ಹುತ್ತ ಹಾವಿಗೆ ಚಂದ ಮುತ್ತು ಕೊರಳಿಗೆ ಚಂದ। ಸತ್ತಿಗೆಯು ಚೆಂದವರಸಗೆ। ಲೋಕಕ್ಕೆ ಸತ್ಯವೇ ಚೆಂದ ಸರ್ವಜ್ಞ॥3॥ ಆಡದೆ ಮಾಡುವನು ರೂಢಿಯೊಳ ಗುತ್ತಮನು। ಆಡಿ ಮಾಡುವನು ಮಧ್ಯಮನಧಮ ತಾ। ನಾಡಿ ಮಾಡದವ ಸರ್ವಜ್ಞ॥4॥ ಬಲ್ಲೆನೆಂಬರ ಮಾತು ಎಲ್ಲವು ಹುಸಿಕಾಣೋ। ಬಲ್ಲರೆ ಬಲ್ಲೆನೆನಬೇಡ ಸುಮ್ಮನಿರ। ಬಲ್ಲನೇ ಬಲ್ಲ ಸರ್ವಜ್ಞ॥5॥ ಉತ್ತಮರೆಂಬುವರು ಸತ್ಯದಿಂ ಬಾಳುವರು। ಉತ್ತಮರನೇನೂ ಎನಬೇಡ ಜಗಕೆಲ್ಲ। ಮುತ್ತಿನಂತವರು ಸರ್ವಜ್ಞ॥6॥ ಬರೆ ಕಂಡು ಕರೆಯದನ ಬರೆ ಕುಳ್ಳಿರೆನ್ನದನ। ಸರಸ ಸಜ್ಜನಿಕೆಯಿಲ್ಲ ದವನ ಸಖ್ಯವ। ಬೆರಸಲೇ ಬೇಡ ಸರ್ವಜ್ಞ॥7॥ ಹಂಗಿನರ ಮನೆಗಿಂತ ವಿಂಗಡದ ಗುಡಿಲೇಸು। ಭಂಗಬಟ್ಟುಂಬ ಬಿಸಿಯನ್ನಕಿಂತಲು। ತಂಗುಳವೆ ಲೇಸು ಸರ್ವಜ್ಞ॥8॥ ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ। ದುರ್ಜನರ ಕೂಡೆ ಒಡನಾಟ ಬಚ್ಚಲಿನ। ರೊಚ್ಚಿನಂತಿಹುದು

ಸರ್ವಜ್ಞ॥9॥ ಮಾನಹೀನರ ಸಂಗವೇನು ಕೊಟ್ಟರು ಬೇಡ। ಜ್ಞಾನವುಳ್ಳವರ ಸಂಗ ತಾ ಸಕ್ಕರೆ। ಜೇನ ಸವಿದಂತೆ ಸರ್ವಜ್ಞ॥10॥ ಕೊಟ್ಟದ್ದು ತನಗೆ ಬಚ್ಚಿಟ್ಟಿದ್ದು ಪರರಿಗೆ। ಕೊಟ್ಟು ನಾ ಕೆಟ್ಟೆನೆನ ಬೇಡ ಅದು ಮುಂದೆ ಕಟ್ಟಿದಾ ಬುತ್ತಿ ಸರ್ವಜ್ಞ॥11॥ ಗಾನ ವಿದ್ಯೆಯೆ ಲೇಸು। ಮಾನವತಿ ಸತಿ ಲೇಸು। ಸ್ವಾನುಭಾವಿಗಳ ಕೆಳೆಲೇಸು-ಎಲ್ಲಕ್ಕೂ। ದಾನಿಯೇ ಲೇಸು ಸರ್ವಜ್ಞ॥12॥ ದಾನದ ಫಲದಿಂದ ಭೂನಾಥನಾಗುವ। ಭಾನುಮಂಡಲವ ನ್ನೊಡೆದೇರಿ-ಸ್ವರ್ಗಕ್ಕೆ ತಾನೊಡೆಯನಹನು- ಸರ್ವಜ್ಞ॥13॥ ಅನ್ನವನು ಇಕ್ಕುವುದು ನನ್ನಿಯನು ನುಡಿಯುವುದು ತನ್ನಂತೆ ಪರರ ಬಗೆ ದೊಡೆ - ಕೈಲಾಸ ಬಿನ್ನಾಣವಕ್ಕು ಸರ್ವಜ್ಞ॥14॥ ಕೆಡಕು ಬಂದೀತೆಂದು ಅಡವಿಗೋಡಲು ಬೇಡ। ಬಿಡದೋದಿ ಭಂಗ ಪಡಬೇಡ-ವಿಧಿ ಕಾಣ ದಡವಿಗಳುಂಟೆ-ಸರ್ವಜ್ಞ॥15॥ ಆರು ಬೆಟ್ಟವನೊಬ್ಬ ಹಾರುವೆ ನೆಂದರೆ ಧೀರ ನೀನಹುದು ಎನಬೇಕು ಮೂರ್ಖನೋಳ್ ಹೋರಾಟ ಸಲ್ಲ-ಸರ್ವಜ್ಞ॥16॥ ಸಾಲವನು ಕೊಂಬಾಗ ಹಾಲೋಗರುಂಡಂತೆ। ಸಾಲಿಗನು ಬಂದು ಎಳೆವಾಗ -ಕಿಬ್ಬದಿಯ ಕೀಲು ಮುರಿದಂತೆ -ಸರ್ವಜ್ಞ॥17॥ ನಡೆವುದೊಂದೇ ಭೂಮಿ। ಕುಡಿವುದೊಂದೇ ನೀರು। ಸುಡುವರೆ ಕಿಚ್ಚು ಎರಡಿಲ್ಲ-ಲೋಗರು। ಒಡಗೂಡರೇಕೆ- ಸರ್ವಜ್ಞ॥18॥ ವಿದ್ಯೆಕಲಿಸದ ತಂದೆ ಬುದ್ಧಿ ಹೇಳದ ಗುರುವು ಬಿದ್ದಿರಲು ಬಂದು ನೋಡದ ತಾಯಿಯು। ಶುದ್ಧವೈರಿಗಳು ಸರ್ವಜ್ಞ॥19॥ ಒಡಲೊಳಡ ಗಿದ ವಿದ್ಯೆ। ಒಡಗೂಡಿಬರುತಿರಲು। ಒಡಹುಟ್ಟಿ ದವರು ಕಳ್ಳರು ನೃಪರದನು ಪಡೆಯ ರೆಂತೆಂದ ಸರ್ವಜ್ಞ॥20॥ ಗುರುವಚನ ಉಪದೇಶ। ಗುರುವ ಚನವೇ ಭಕ್ತಿ। ಗುರುವಚನ ಮೋಕ್ಷ ಪರಮಾರ್ಥ ಇವುತಾನು ಪರಮಾರ್ಥ ಕಾಣ ಸರ್ವಜ್ಞ॥21॥

**ಹರ ತನ್ನ ಭಕ್ತರ ತಿರಿವಂತೆ** — **ರಾಗ: ಮೋಹನ, ಖಂಡಏಕತಾಳ**

ಹರ ತನ್ನ ಭಕ್ತರ ತಿರಿವಂತೆ ಮಾಡುವ। ಒರೆದುನೋಡುವ ಸುವರ್ಣದ ಚಿನ್ನದಂತೆ॥ ಅರೆದುನೋಡುವ ಚಂದನದಂತೆ। ಅರಿತು ನೋಡುವ ಕಬ್ಬಿನ ಕೋಲಿನಂತೆ॥ ಬೆದರದೆ ಬೆಚ್ಚದೆ ಇದ್ದಡೆ। ಕರವಿಡಿದೆತ್ತಿಕೊಂಬ ನಮ್ಮ ರಾಮನಾಥನು॥

**ಹೊಳೆವ ಕೆಂಜೆಡೆಗಳ ಮೇಲೆ** — **ರಾಗ: ದುರ್ಗ ಖಂಡಏಕತಾಳ**

ಹೊಳೆವ ಕೆಂಜೆಡೆಗಳ ಮೇಲೆ ಎಳೆವೆಳದಿಂಗಳು। ಫಣಿಮಣಿ ಕರ್ಣಕುಂಡಲದವನ ನೋಡವ್ವಾ। ರುಂಡಮಾಲೆಯ ಕೊರಳವನ ಕಂಡರೆ ಒಮ್ಮೆ ಬರಹೇಳವ್ವಾ। ಗೋವಿಂದನ ನಯನ ಉಂಗುಟದ ಮೇಲಿಪ್ಪುದು ಚೆನ್ನಮಲ್ಲಿಕಾರ್ಜುನ ದೇವಂಗಿದು ಕುರುಹವ್ವಾ॥

**ಹೊನ್ನು ಮಾಯೆ ಎಂಬರು** — **ರಾಗ : ಬಾಗೇಶ್ರೀ, ತ್ರಿತಾಳ**

ಹೊನ್ನು ಮಾಯೆ ಎಂಬರು ಹೊನ್ನು ಮಾಯೆಯಲ್ಲ। ಹೆಣ್ಣು ಮಾಯೆ ಎಂಬರು ಹೆಣ್ಣು ಮಾಯೆಯಲ್ಲ। ಮಣ್ಣುಮಾಯೆ ಎಂಬರು ಮಣ್ಣು ಮಾಯೆಯಲ್ಲ। ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರಾ॥

## ಸಂತಶಿಶುನಾಳ ಷರೀಫ್

**ಕೋಡಗನ ಕೋಳಿ ನುಂಗಿತ್ತ** — **ರಾಗ : ಪುನ್ನಾಗವರಾಳಿ**

ಕೋಡಗನ ಕೋಳಿ ನುಂಗಿತ್ತ ನೋಡವ್ವ ತಂಗಿ। ಕೋಡಗನ ಕೋಳಿ ನುಂಗಿತ್ತ॥ಪ॥ ಆಡು ಆನೆಯ ನುಂಗಿ, ಗೋಡೆ ಸುಣ್ಣವ ನುಂಗಿ। ಆಡಲು ಬಂದ ಪಾತರದವಳ ಮದ್ದಳೆ ನುಂಗಿತ್ತಾ ತಂಗಿ॥1॥ ಒಳ್ಳು ಒನಕೆಯ ನುಂಗಿ। ಕಲ್ಲು ಗೂಟವ ನುಂಗಿ। ಮೆಲ್ಲಲು ಬಂದ ಮುದುಕಿಯನ್ನೆ ನೆಲ್ಲು ನುಂಗಿತ್ತ॥2॥ ಹಗ್ಗಮಗ್ಗವ ನುಂಗಿ। ಮಗ್ಗವ ಲಾಳಿನುಂಗಿ। ಮಗ್ಗದಲಿರುವ ಅಣ್ಣನನ್ನೆ ಮಣೆಯು ನುಂಗಿತ್ತಾ ತಂಗಿ॥3॥ ಎತ್ತು ಜತ್ತಗಿ ನುಂಗಿ ಬತ್ತ ಬಾನವ ನುಂಗಿ ಮುಕ್ಕುಟ ತಿರುವೋ ಅಣ್ಣನ ಕುಣಿಯು ನುಂಗಿತ್ತ॥4॥ ಗುಡ್ಡ ಗವಿಯನು ನುಂಗಿ। ಗವಿಯು ಇರುವೆಯ ನುಂಗಿ। ಗೋವಿಂದ ಗುರುವಿನ ಪಾದ ನನ್ನನ್ನೆ ನುಂಗಿತ್ತಾ ತಂಗಿ॥5॥ ಕೋಡಗನ ಕೋಳಿ ನುಂಗಿತ್ತಾ ತಂಗಿ॥

## ಸಂದೇಶ

**ಉತ್ ಜಾಗ್ ಮುಸಾಫಿರ್ (ಹಿಂದಿ)** **ರಾಗ : ಸಾವೇರಿ**

ಉತ್ ಜಾಗ್ ಮುಸಾಫಿರ್ ಬೋರ್ ಭಈ। ಅಬ್ ರೈನ್ ಕಹಾಂ ತೂ ಸೋವತ್ ಹೈ। ಜೋ ಸೋವತ್ ಹೈ ಸೋ ಖೋವತ್ ಹೈ ಜೋ ಜಾಗತ್ ಹೈ ಸೋ ಪಾವತ್ ಹೈ।। ಟುಕ್ ನೀಂದ್ ಸೇ ಅಂಖಿಯಾಂ ಖೋಲ್‌ಕರ್ ಜರಾ। ಅಪನೇ ಪ್ರಭು ಸೇ ತೂ ಧ್ಯಾನ್ ಲಗಾ। ಯಹ್ ಪ್ರೀತ್ ಕರನ್ ಕೀ ರೀತ್ ನಹೀಂ। ಪ್ರಭು ಜಾಗತ್ ಹೈ ತೂ ಸೋವತ್ ಹೈ।। ಜೋ ಕಲ್ ಕರ್‌ನಾ ಸೋ ಆಜ್ ಕರ್ ಲೇ। ಜೋ ಆಜ್ ಕರ್‌ನಾ ಸೋ ಅಬ್ ಕರ್‌ಲೇ। ಜಬ್ ಚಿಡಿಯನ್ ನೇ ಚುಗ್ ಖೇತ್ ಲಿಯಾ। ತಬ್ ಪಛತಾಯೇ ಕ್ಯಾ ಹೋವತ್ ಹೈ।। ನಾದಾನ್ ಭುಗತ್ ಕರ್‌ನೀ ಅಪನೀ। ರೇ ಪಾಪೀ ಪಾಪ್ ಮೇ ಚೈನ್ ಕಹಾಂ। ಜಬ್ ಪಾಪ್ ಕೀ ಗಠರೀ ಶೀಶ್ ಧರೀ। ತಬ್ ಶೀಶ್ ಪಕಡ್ ಕ್ಯೋಂ ರೋವತ್ ಹೈ।।

**ಕಾಫಿಯನು ಕೊಡುದೇವ** **ರಾಗ: ಮೋಹನ, ಛಾಪುತಾಳ**

ಕಾಫಿಯನು ಕೊಡುದೇವ ಕೈವಲ್ಯದ। ಅನಂತ ಸಂಸಾರಿ ಎನಗಾಧಾರವಾಗಿರುವ।।ಪ।। ಕಾರುಣ್ಯ ನಿಧಿಯೆಂಬೋ ಕಾವೇರಿ ಉದಕವ ತಂದು। ಜನ್ಮವಾಸನೆ ಜ್ಯೋತಿಯನೆ ಬೆಳಗಿ। ಭವ ಭವಾಂತರದ ನಿಜ ಭೂರಿ ತಿಂಡೀ ಕಾಫೀ। ನವ ವಿಧದ ಭಕುತಿಯಲಿ ಸುವಾಸನೆಯ।।1।। ಅಷ್ಟಮದವೆಂಬ ವ್ಯಂಜನಗಿರಿಯ ಬೀಜವ ತಂದು। ಕುಟ್ಟಿಪುಡಿಮಾಡಿ ಪರಿಪೂರ್ಣದಿಂದ। ಹೊಟ್ಟು ಹೊಂದುಳಿದ ಬಟ್ಟೆಯಲಿ ಭಟ್ಟಿಯನಿಳುಹಿ। ಬಟ್ಟ ಬಯಲಾಗಿರುವ ಬಟ್ಟಲೊಳಗೇ ತಂದು।।2।।

**ಕೇಳಿರಿ2 ಎಲ್ಲ ಬಂಧುಗಳೆ (ಗೀಗೀಪದ)** **ರಾಗ: ಲಾವಣಿಧಾಟಿ**

ಕೇಳಿರಿ ಕೇಳಿರಿ ಎಲ್ಲ ಬಂಧುಗಳೆ। ಪೇಳುವೆ ನಾನೀ ಕಥೆಯನ್ನೂ। ಮನೆ ಮದ್ದಿನ ಗಿಡಗಳ ಕಥೆಯನ್ನೂ ಚೆನ್ನಾಗಿ ಆಲಿಸಿ ಜೀವನದಿ ಪಾಲಿಸಿ। ಸ್ವಾಸ್ಥ್ಯ ಜೀವನವ ಸಾಗಿಸಿರೀ।।ಪ।। ಗಿಯ ಗೀಯ ಗಾಗಿಯ ಗೀಯಾ। ಗೀಯ ಗೀಯಗಾ।।ಅರರರತಿ।। ಮನೆಯಸುತ್ತ ಮುತ್ತ ಕಣ್ಣು ಹಾಯಿಸಿದಾಗ ಕಾಣ್ವದು ನಿಮಗೇ ಸಸ್ಯ ಸಂಜೀವಿನಿ। ಕಳೆಯೆಂದು ಕೀಳದೇ ಕಲೆಯಿಂದ ಸಾಕಿರಿ ಕೊಡುವುದು ನಿಮಗೇ ವನದ ಸಿರಿ ಕೊಡುವುದು ನಿಮಗೆ ಸ್ವಾಸ್ಥ್ಯಸಿರಿ।।ನೀವ್।।1।। ಗೀಯ ಗಾಗಾ। ಗರಿಕೆ ಹುಲ್ಲು ಎಂದು ಮೂಗ ಮುರಿಯದಿರಿ ಮೂಗಿನ ದೋಷಕೆ ಹಿರಿಮದ್ದೂ। ಶೀತಕೆಮ್ಮು ಜ್ವರ ಇತ್ಯಾದಿಗಳಿಗೇ ಇದುವೆ ನೋಡು ಸಿಡಿಮದ್ದೂ।।2।। ಗೀಯಗಾಗಾ... ಕಹಿಬೇವೆಂದು ಮುಖ ಹಿಂಡದಿರಿ ಕಾಮಧೇನು ಇದು ಜಗಕೆಲ್ಲಾ। ಹಿಂಡಿದ ಮುಖವ ನಗಿಸುತ ಬೇವು ಜೀವನವಾ ಸಿಹಿ ಮಾಡುವುದು ಜೀವನವಾ ಸಿಹಿ ಮಾಡುವುದು।।3।। ಗೀಯ ಗಾಗಾ... ಪೂಜೆಗೆ ಮಾತ್ರ ತುಳಸೀ ಎಂದು ಜೋಡಿಸಿ ಕೈಯಾ ಕೂಡದಿರೀ। ತುಳಸೀ ದಳವಾ ನಿತ್ಯವೂ ಸೇವಿಸಿ ಶೀತಕೆಮ್ಮು ದೂರಾಗುವುದೂ ಶೀತ ಕೆಮ್ಮು ದೂರಾಗುವುದು ।।4।। ಗೀಯ ಗಾಗಾ... ಎಕ್ಕದ ಗಿಡದಲಿ ಗಣಪನಿರುವನೆಂದು ನಂಬಿಕೆ ಇದ್ದರೆ ಸಾಲದೂ। ಬರಿ ನಂಬಿಕೆ ಇದ್ದರೆ ಸಾಲದೂ। ಎಕ್ಕದ ಎಲೆಗೇ ಹರಳೆಣ್ಣೆ ಸವರೀ ನೋವಿಗೆ ಕಾವು ನೀಡಿರೀ।।5।। ಗಿಯಗಾಗ... ಶಿವನಿಗೆ ಪ್ರಿಯವೆಂಬ ಬಿರುದನು ಪೊತ್ತು ಬಿಲ್ವವೃಕ್ಷ ಇಲ್ಲಿಹುದಲ್ಲ, ಶಿವ ಪೂಜೆಗೆ ಇದು ಪ್ರಿಯ ನೋಡಾ ಆಮಶಂಕೆ ನಿಶ್ಯಕ್ತಿಗೆ ಇದುವೆ ಪ್ರಿಯ ಚಿಕಿತ್ಸೆಯಾಗಿದೆ ನೋಡಾ।।6।। ಗೀಯಗಾಗಿ... ಚೆಂದದ ಗುಲಾಬಿ ಎಂದು ಪೇಳುತಾ ಪರಿಮಳ ಮಾತ್ರವೇ ಮೂಸದಿರೀ। ಗುಲಾಬಿ ಜತೆಗೇ ಮಧುವನು ಸೇರಿಸಿ ಸೇವಿಸಿ ಅರಿಯಿರಿ ಅದರ ಗುಣಾ।।7।। ಪಾಕಶಾಲೆಯಿಂದ ಇಂಗಿನ ಪರಿಮಳ ಮೂಗನೂ ಚುರುಕೂಗೊಳಿಸುವುದೂ। ನಾಲಿಗೆ ರುಚಿಗೇ ಮಾತ್ರವೆ ಸಾಕೇ। ಇಂಗಿನ ಉಪಯೋಗ ಇಷ್ಟೇಯೇ।।8।। ಗೀಯ ಗಾಗಾ...ಅಪರೂಪದಲಿ ಚೇಳು ಕಡಿದರೇ ಮೈಯೆಲ್ಲಾ ಉರಿ ಉರಿ ಉರಿಯೂ। ಇಂಗಿನ ಜತೆಯಲಿ ಬೆಲ್ಲವ ಸೇರಿಸಿ ಕಡಿತಕೆ ಹೆಚ್ಚಿ ಗುಣಕಾಣೀ।।9।। ಗೀಯ ಗಾಗಾ... ಎಲ್ಲಾ ಸಾರಿನಾ ರುಚಿಗಾಧಾರಾ ಸಾಸಿವೆ ಒಗ್ಗರಣೆಯ ನೋಡಾ। ವಗ್ಗರಣೆ ಮಾತ್ರಕೆ ಸೀಮಿತವಲ್ಲಾ ಸಾಸಿವೆ ಪಾತ್ರ ಬಹು ನೋಡಾ।।10।। ಗೀಯ ಗಾಗಾ... ಸಂದಿಯ ಊತ

ವ್ರಣಾದಿಗಳಿಗೇ ಸಾಸಿವೆ ತೈಲವ ಲೇಪಿಸಿ ನೋಡಾ। ಊತವ ಹರಿಸೀ ವ್ರಣಗಳ ಒಣಗಿಸಿ ಶೀಘ್ರವೇ ಗುಣ ಕೊಡುವುದು ನೋಡಾ॥11॥ ಗೀಯ ಗಾಗಾ... ಮೂರ್ಖರು ನಾವು ಶುದ್ಧ ಮೂರ್ಖರು ನಾವು(2) ತಾಯಿಯಂಥಾ ಪರಿಸರವ ಹುಚ್ಚರಂತೆ ಹಾಳುಗೆಡುವಾ ಚೆಂದದಿಂದ ಬೆಳೆದು ನಿಂದ ಹೊಂಗೆಯಾ ಮರವನೆ। ಕುಂದುವಂತೆ ಅದನು ನಾವ್ ಕಡಿದು ಕಡಿದು ಹಾಕುವೆವೂ॥ ಮುಗಿಲುಗಳನು ಅಪ್ಪಿನಿಂತ ತಾಳೆಯಾ ಮರವನೆ ದಯೆಯಿಲ್ಲದೆ ಅದನು ನಾವು ಸುಟ್ಟು ಸುಟ್ಟು ಹಾಕುವಂತ ಮೋಡಗಳ ತಡೆಹಿಡಿದು ಮಳೆ ತರಿಸುವ ಮರಗಳ ಬುದ್ಧಿಯಿಲ್ಲದೆ ನಾವು ತರಿದು ತರಿದು ಹಾಕುವೆವೂ। ಜಗದೆಲ್ಲ ಜೀವಿಗೆ ನಾವು ಬದುಕು ಕೊಡುವ ಪರಿಸರವಾ ಅಂಧಕಾರದ ನಾವು ಹಾಳುಹಾಳು ಮಾಡುವಂಥಾ... ಗೀಯಗಾಗಾ... ಪರಿಸರದಾ ಚೋರರನ್ನು ಜತನದಿಂದ ಸಾಕುವೆವು। ಅವರ ತಪ್ಪುಗಳನ್ನೆಲ್ಲಾ ತಲೆಯ ತೂಗಿ ಒಪ್ಪುವೆವೂ ಪರಿಸರದ ಸರ್ವನಾಶ ಕಣ್ಣೆದುರಿಗೆ ನಡೆದರೂ ಮೂಕರಂತೆ ಬಾಯಿ ಮುಚ್ಚಿ ಕೂಡುವಂತ ಜನರು ನಾವು॥ ಗೀಯಗಾಗಾ... ಸಾಕಿಂದಿಗೆ ಮೂರ್ಖತನಾ ಮೈ ಝಾಡಿಸಿ ಏಳುವಾ ಪರಿಸರದ ಅರಿಗಳನ್ನು ಹೊಡೆದು ಹೊಡೆದು ಅಟ್ಟುವಾ ಪರಿಸರವ ರಕ್ಷಿಸಲು ಮುಂದೆ ಮುಂದೆ ಸಾಗುವಾ। ಪರಿಸರವೇ ದೇವರೆಂದು ಬಾಗಿಬಾಗಿ ನಮಿಸುವಾ। ಜಯವು ಜಯವು ಪರಿಸರಕೆ ಜಯವು ಜಯವು ಜಯವೂ॥ ಬೆಟ್ಟದ ನೆಲ್ಲಿ ಹುಳಿ ಹುಳಿ ಎಂದೂ ಹೆದರಿ ಅಟ್ಟವಾ ಏರದಿರೀ। ನೆಲ್ಲಿಯ ಔಷಧಿ ಗುಣ ಕಂಡ ವೈದ್ಯರು॥12॥ ಜಗದ್ಧಾತ್ರಿ ಎಂದು ಕರೆದಿಹರೂ ಗೀಯಾ ಗಾಗಾ...॥ ಅಕಾಲದಲ್ಲಿ ಕೂದಲು ನರೆತರೇ ನೆಲ್ಲಿಯ ತೈಲ ಉಪಯುಕ್ತಾ। ಕಾಮಾಲೆಯಲ್ಲಿ ರಕ್ತ ಕೊರತೆಯಲ್ಲಿ ನೆಲ್ಲಿಯ ಉಪಯೋಗ ಅಪಾರಾ॥13॥ ಗೀಯ ಗಾಗಾ...। ಲೋಳೆ ಸರದಲೀ ಲೋಳೆ ಇರುವುದೆಂದು ಅಸಹ್ಯ ಭಾವವಾ ತೋರದಿರೀ। ಕುಮಾರಿ ಎಂದು ಕರೆವರು ಇದನೂ ಕುಮಾರಿಯರಿಗಿದೂ ಒಳಿತೆಂದೂ॥14॥ ಅರಶಿನ ಕಾಮಾಲೆ ನೇತ್ರ ದೋಷದಿ ಕುಮಾರಿ ಚಿಕಿತ್ಸೆ ಉಪಯುಕ್ತಾ ಶೀತಕೆಮ್ಮು ಜ್ವರಾದಿಗಳಿಗೇ। ಕುಮಾರಿ ರಸವಾ ಸೇವಿಸಿರೀ॥ ಗೀಯಾ ಗಾಗಾ... ದೇವಿಪೂಜೆಗೆ ಸೀಮಿತವಾಗದೆ ದಾಸವಾಳವೂ ನಿಂದಿಹುದೂ। ಜೀವಂತ ದೇವಿಯರ ಉಪಯೋಗಕೆಂದೋ ಜೀವನವನ್ನೇ ನೀಡಿಹುದೂ। ಗೀಯಾ ಗಾಗಾ...॥15॥ ಕೇಶವೃದ್ಧಿಗೆ ಕೃಷ್ಣ ಕೇಶಕೇ ದಾಸವಾಳವೂ ಉಪಯುಕ್ತಾ। ಉಷ್ಣತೆ ಹಾಗೂ ಮೂಲವ್ಯಾಧಿಗೇ ದಾಸವಾಳವಾ ಸೇವಿಸಿರೀ॥16॥ ಗೀಯಾ ಗಾಗಾ... ಹಿತ್ತಲಗಿಡವೂ ಮದ್ದಿಗೆ ಬಾರದೆಂಬ ಆಲಸ್ಯ ಭಾವವು ಸರಿಯಲ್ಲಾ। ಹಿತ್ತಲಲಿರುವಾಗ ಗಿಡಗಳು ಎಲ್ಲವು ಸಸ್ಯ ಸಂಜೀವಿನಿ ತಿಳಿನೋಡಾ॥ ಸಸ್ಯ ಸಂಜೀವಿನಿ ಕಥೆಯನು ನೀವೂ॥17॥ ಬರಿದೇ ಆಲಿಸಿ ಕೂಡದಿರೀ। ನಿತ್ಯದ ಬದುಕಲಿ ಪಾಲಿಸಿರಿ ನೀವು ಸಸ್ಯಗಳನು ಪೋಷಿಸಿರೀ। ಆರೋಗ್ಯ ಸಂಪತ್ತು ಹೆಚ್ಚುವುದಲ್ಲದೆ ಜೀವನ ಸೊಗಸೂ ಆಗುವುದೂ। ಸಸ್ಯ ಸಂಜೀವಿನಿ ಮಮತೆಯಿಂದಲೇ ನಮ್ಮನ್ನೆಲ್ಲಾ ಹರಸುವಳೂ॥18॥

**ಕಂಡ ವಸ್ತುವನುಳಿದು** **ರಾಗ : ಹಿಂದೋಳ**

ಕಂಡ ವಸ್ತುವನುಳಿದು ಕಾಣದ್ದುದ ಬಯಸುವರೆ। ಕೆಂಡವನು ಕರ್ಪೂರ ಬಯಸಿದಂತೆ॥ ಇದೇ ಬಾಳ ಪಲ್ಲವಿಯು ಇದೇ ಯಶೋದುಂದುಭಿಯು॥ಪ॥ ಭಂಡರಿಗೆ ಬಲು ಭಾಗ್ಯ ಬೇಡೆನ್ನಲು ಬಂದರೆ। ಹಿಂಡನಗಲಿದ ಜಿಂಕೆ ಬೆದರುವಂತೆ। ಇಂದಿನೀ ಬಾಳೆಲ್ಲ ನರಕವಾದರೂ ಸರಿಯೇ ಮನುಜನಂತೆಯೆ ಬಾಳು। ತಾಳ್ಮೆಯಿಂದ॥1॥ ಮಂದಿಯಾಡುವ ಮಾತು ಹೀನವಿರಲೆದೆಬಿರಿಯೆ। ನಿನಗು ಧನವುಂಟೆಂಬ ಧೈರ್ಯದಿಂದ। ನಿನ್ನ ನಿರ್ಮಲ ಹೃದಯ ಜ್ಯೋತಿಯನು ಬೆಳಗಿಸುತೆ। ನೈರ್ಮಲ್ಯದಿಂ ಬರುತಿದೆಂಬುದನರಿತು॥2॥ ನಿನ್ನ ನೀತಿಯೆ ನಿನಗೆ। ಬಾಳಕ್ಕೆ ಕಿರುಹಣತೆ। ಧರ್ಮವನು ದೂಡದಿರು ಮೈಮರೆತು॥ ದುರ್ಜನರ ಗುರುತಿಸಲು ಕರಮುಗಿದು ಶಿರಬಾಗು। ಸಜ್ಜನರು ಸಜ್ಜನರೇ ಹಾಲು ಹಾಲೇ॥3॥

**ಚಟ ಏಕೆ ಕಲ್ತಿ ತಮ್ಮ** **ರಾಗ:ಮುಖಾರಿ**

ಚಟ ಏಕೆ ಕಲ್ತಿ, ತಮ್ಮ ಇದೇ ಚಟ್ಟಕ್ ದಾರಿ। ಚಟ ಬೇಗ ಬಿಟ್ಬಿಡು ತಮ್ಮ। ಇದೇ ಚಟುವಟಿಕೇಗೆ ದಾರಿ॥1॥ ಗೆಳೆಯರು ಕಲಿಸಿದರು ಅಂತ, ಸಿಗರೇಟ್ ಸೇದೋದ್ ಕಲ್ತೆ। ಬೇಜಾರ್ ಕಳಿತೀನಿ ಅಂತ ಬ್ರಾಂದಿ ಹೆಂಡ ಕುಡಿದೆ॥2॥

ಬೇಗ ದುಡ್ಡು ಮಾಡ್ತೀನಂತ ಕುದುರೇ ರೇಸಿಗೆ ಕಟ್ದೆ। ದುಡ್ಡು ಸಿಗ್ದೆ ಲದ್ದಿ ಸಿಗ್ತು, ಹಿಗ್ಗಾ ಮುಗ್ಗಾ ಬಿದ್ದೇ ॥3॥ ಚಟ ಕಲಿಸೋ ದುಶ್ಚಟದೋರಿಂದ ದೂರ ಸರಿ ನೀ ತಮ್ಮಾ। ಇಲ್‌ದಿದ್ರೆ ನೀನು ಬೇಗ, ಏರ್ತಿ ಚಟ್ಟ ಗಟ್ಟಿ॥4॥

**ಜೂಜಾಡಿ ಗೆದ್ದವರು ಯಾರಿಲ್ಲ ನೋಡು.... ರಾಗ:ಬಾಗೇಶ್ರೀ**

ಜೂಜಾಡಿ ಗೆದ್ದವರು ಯಾರಿಲ್ಲ ನೋಡು.....। ಆದಾರಿ ಹಿಡಿದವಗೆ ತಪ್ಪಿಲ್ಲ.... ಕೇಡು(2)। ಆಸೆ ಅಮಲೇರಿದರೆ ಜೂಜನ್ನೇ ಆಡಿ। ಮಡದಿ ಮನೆ ಮಾರುಗಳ ಮರೆಯಬೇಡಿ॥ ಜೂಜಾಡಬೇಕೆಂಬ ಬಯಕೆ ಬಂದಾಗ। ನಳಚರಿತೆ ಭಾರತವ ಮೊರೆಹೋಗಿರೋ ಬೇಗ॥1॥ ಪಾಂಡವರನ್ನು ವನಕ್ಕಟ್ಟಿದ್ದೇ ಜೂಜು। ಕುರುವಂಶ ನಾಶವನ್ನೇ ಗೈದದ್ದೇ ಜೂಜು। ನಳ ನೃಪಗೆ ಸೀರೆಯನ್ನೇ ಉಡಿಸಿದ್ದೇ ಜೂಜು। ಹೇ ಜಾಣ ಬೇಡ ನಿನಗದರ ಗೋಜು॥2॥

**ತಂಗಾಳಿ ಬೀಸುತ ತಲೆ ರಾಗ: ಹಿಂದೋಳ**

ತಂಗಾಳಿ ಬೀಸುತ ತಲೆ ತೂಗುತಿರುವೆ ತರುವೆ। ತನುವಿಗೆ ತಂಪನೀಡಿ ಮುದ ನೀಡುತಿರುವೆ ತರುವೆ॥1॥ ಮನದಾಳಕಿಳಿದು ಮುನ್ನೋಟ ನೋಡುತಿರುವೆ ತರುವೆ। ಪರರಿಗಾಗಿ ಬದುಕ ಸವೆಸಿ ತೃಪ್ತಿ ಪಡುತಿರುವೆ ತರುವೆ॥2॥ ಹೂವು ಹಣ್ಣಿನಾ ಭಾರಹೊತ್ತು ನಿಂತ ನೀ ಸವಿಯಲಿಲ್ಲ ಒಂದನಾದರು। ಪಕ್ಷಿಸಂಕುಲಕೆ ತಾಣವಿತ್ತ ನೀ ಮೆರೆಯಲಿಲ್ಲ ಒಮ್ಮೆಯಾದರು॥3॥ ಉದಯರಾಗ ಸಂಧ್ಯಾರಾಗ ಕೇಳುತಲಿ। ನೀ ಮೆಚ್ಚಿ ಪೋಷಿಸುವೆ। ಮನದ ಮಿಡಿತ ಹಿಡಿತಕೆ॥4॥ ನೀ ಕಡಿವಾಣ ಹಾಕಿ ಸಾರುತಿರುವೆ। ಸ್ವಾರ್ಥ ಬೇಡ ಸಾರ್ಥಕ ಬದುಕ ನಡೆಸೆಂದು॥5॥ ಕೆ. ರಾಜಲಕ್ಷ್ಮಿ

**ಮಗಾ ಹುಟ್ಟಿದವ್ವ ಎನಗೊಬ್ಬ ರಾಗ : ಅಭೇರಿ**

ಮಗಾ ಹುಟ್ಟಿದವ್ವ ಎನಗೊಬ್ಬ ಮಗಹುಟ್ಟಿದವ್ವ। ಮಗಾಹುಟ್ಟಿ ಎನ್ನ ಮಾಯವನಳಿಸಿ। ಸದಾಹಿಡಿಸಿ ಎನ್ನ ಜನ್ಮವ ತಣಿಸಿದ॥ಪ॥ ನವ ತಿಂಗಳವ್ವ ಮೈಯೆಲ್ಲ ನೋವತಿಂದೆನವ್ವ। ದೇಹಕೆ ಹತ್ತದ ಮಾಯಕೆ ನಿಲುಕದ। ಮೋಸಗಾರನವ್ವ॥1॥ ಮಗಾಹುಟ್ಟಿದಾಗ ಮನೆಯೆಲ್ಲ ಬೆಳಕಕಂಡೆನವ್ವ। ಬಾಳ ಜ್ಯೋತಿಗಳ ಹೂವ ಬಾಣಗಳ। ಬಹಳ ಕಂಡೆನವ್ವ॥2॥ ಆಸೆ ಅಳಿಸಿದವ್ವ ಆರು ಮೂರನಳಿಸಿದವ್ವ। ನೋರ ಬಿಟ್ಟು ಎನ್ನ ಪೂರದ ಒಳಗೆ ಸೂರ್ಯಹುಟ್ಟಿದವ್ವ॥3॥ ಗಟ್ಟಿ ತೊಟ್ಟಿಲವ್ವ ಆತಗಾಗಿ ಕಟ್ಟಿದೆವ್ವ। ಪಂಚವರ್ಣದವ್ವ ಪ್ರಭುವಿನ ತೂಗು ತೊಟ್ಟಿಲವ್ವ॥4॥ ಯಾರ ಪುಣ್ಯನವ್ವ। ನಿಮ್ಮರಿಗಿ ಗುರುವ ತಂದಿತವ್ವ ಚೆಂದಾಗಿ ಆತನ ಪಾದಕ ಮುಂದೆ ಕಂದನ ಹೊಡೆದನವ್ವ॥5॥

**ರಂಗನೊಲಿದಾ ಗೋವಿಂದನೊಲಿದಾ ರಾಗ: ಪೂರ್ವಿಕಲ್ಯಾಣಿ**

ರಂಗನೊಲಿದಾ ಗೋವಿಂದನೊಲಿದಾ। ರಾಮನೊಲಿದಾ ರಾಮರ್ ಕೃಷ್ಣನೊಲಿದಾ॥ಪ॥ ಒಪ್ಪ ಜಾಜಿ ಚಪ್ಪರ ಮಾಡಿ ಮೇಲೆ ಕಟ್ಟಿದಾ-ಕಣ್ಣ। ರೆಪ್ಪೆ ಹುಯ್ದು ಮುಚ್ಚಿದೊಂದು ಬೆಡಗ ತೋರಿದಾ॥ಅ.ಪ॥ ಕರಿಯ ಪುರದ ನಗರದಲಿ ಕೌರವರು ಪಾಂಡವರು। ಧರಣಿಯನ್ನೆ ಒತ್ತೆಯಿಟ್ಟು ಜೂಜನಾಡಲು ಪಾಂಡವರು। ಧರಣಿಯನ್ನೆ ಒತ್ತೆಯಿಟ್ಟು ಜೂಜನಾಡಲೂ ॥1॥ ಪಾಪಿಕೇಡಿ ಶಕುನಿ ತಾನು ಪಾಪದೊಳಗೆ ಸಿಲುಕಿದನು। ದಾತನು ಧರ್ಮಜನು ದ್ರೌಪದಿಯ ಸೋತನೂ। ಸೋತನೆಂಬ ಸುದ್ದೀ ಕೇಳಿ ಪಾಪಿಯು ದುರ್ಯೋಧನ। ದೂತರಟ್ಟಿ ಪಾಂಡವರ ಬದುಕು ತರಿಸಿದ॥2॥ ಭೂಮಿಕಾಣಿ ಎಲ್ಲ ಸೋತು ಆನೆ ಸಾಲು ಒಂಟೆಸಾಲು ಬೇಡವೆಂದರು ಭಂಡಾರ ತರಿಸಿದಾ। ಪಟ್ಟ ಪದವಿ ಅವರಿಗಿರಲಿ ಬಡವರ್ಹಂಗ ಇದ್ದೇವಂದ್ರೆ। ಕೆಟ್ಟದೊಂದು ಪಗಡೇ ಜೂಜು ಎಲ್ಲಿ ದೊರಕಿತೋ॥3॥

**ಶ್ರಮವೇ ರಾಮನ ಸೇವೆಯು ರಾಗ: ಪೂರ್ಣಷಡ್ಜ**

ಶ್ರಮವೇ ರಾಮನ ಸೇವೆಯು। ಶ್ರಮವೇ ರಾಮನ ಭಕ್ತಿಯು। ಶ್ರಮವೇ ರಾಮನ ಪೂಜೆಯು॥ಪ॥ ಏಳಿರಿ ಏಳಿರಿ

ಭಾರತ ಜನರೇ। ಕೈಯುಳ್ಳವರೇ ಕಾಲುಳ್ಳವರೇ। ಮುಚ್ಚಿದ ಬಾಗಿಲ ತೆರೆಯಿರಿ ನೀವು। ಕಾಲಯಾಪನೆಯ ಸಮಯವಿದಲ್ಲ।।1।। ಶ್ರಮವೇ ಗಂಗಾ ಯಮುನಾ ಸ್ನಾನ। ಶ್ರಮವೇ ಕಾಶಿ ಕಂಚಿಯಾತ್ರೆ। ಇದುವೇ ದೇವನ ಧಾಮವು। ಶ್ರಮವೇ ಜೀವನ ಸಾರ ವಿಶೇಷ।।2।। ಶ್ರಮವೇ ವೃದ್ಧಿಯ ಸಿದ್ಧಿಯ ದಾತ। ಇದುವೇ ಗೀತೆಯಪಾಠವು। ಶ್ರಮಕೆ ಸರಿಯಿಹ ಔಷಧವಿಲ್ಲ। ಶ್ರಮದಲ್ಲಿಹುದು ಎಲ್ಲರ ಸುಖವು।।3।। ಕೆಲಸದ ಮೌಲ್ಯ ಅನಂತವು। ಆದಿ ದೇವನ ಶ್ರಮವನು ಕೇಳಿ। ಕಾಷ್ಠಾಛಾಯಗಳ ಗುರುವಿಗೆ ಇತ್ತ। ಉಭಯ ಸಂಧ್ಯೆಯಲಿ ಸೇವೆಯ ಗೈದ।।4।। ಶ್ರಮವೇ ಸ್ತ್ರೀಯರ ಕಂಠಾಭರಣ। ಶ್ರಮವೇ ಮನುಜನ ಮನೋನಿಗ್ರಹ। ಇದುವೇ ದೇವನ ಧಾಮವು। ಸೇವಾ ದಾನವ ಮಾಡಿರಿ ಅಣ್ಣಾ। ಭಕ್ತ ವಿನೋಬಾ ಕರೆಯುತಲಿಹರು। ಶ್ರದ್ಧೆಯು ಬೆಲೆಗೆ ನಿಲುಕದ ನಿಧಿಯು।।5।।

**ಹಸಿರಾಗಲಿ ಒಣ ನೆಲ(ಲಾವಣಿ)** **ರಾಗ : ಮೋಹನ**

ಹಸಿರಾಗಲಿ ಒಣ ನೆಲ ಪೈರುಗಳಿಂದಲಿ ಎಲ್ಲೆಲ್ಲೂ ಈ ನಾಡಿನಲಿ। ಹಸಿವಿಂಗಲು ಜನ ಹಗಲಿರುಳೆನ್ನದೆ ದುಡಿಯುತಲಿಹರು ಹರುಷದಲಿ।।ಪ।। ಹುಸಿಯಾಗಲಿ ಬಡತನವೆನ್ನುವ ನುಡಿಯದು ಎಂದೆಂದೂ ಈ ದೇಶದಲಿ।।ಅ.ಪ।। ಹೊಸಯುಗ ಬಾಳಿಗೆ ಹೊಸಚೇತನವದು। ಹೊಮ್ಮುತಲೇ ಇರಲಿ।। ಮಿತವಾಗಲಿ ಭೂದಾಹವು। ಮನೆಮಾಲಿಕ ಜನಕೆ(2ಸಾರಿ)। ಹಿತವಾಗಲಿ ಗತಿಕಾಣದ ನೆಲೆಯಿಲ್ಲದ ದೀನರಿಗೆ(2ಸಾರಿ)। ನೆರವಾಗಿರಿ ಬಡರೈತರ ದಿನಗೂಲಿಯ ಹೆಚ್ಚಳಕೆ। ನೆರವಾಗಿರಿ ಜನ ಬಾಲಕ ಶ್ರಮಿಕರ ದಾಸ್ಯವಿಮೋಚನೆಗೆ।।1।। ಗಿರಿಜನ ದಲಿತರು ದೀನರು ಅಂಧರು ಅಂಗವಿಹೀನರ ಏಳಿಗೆಗೇ(2ಸಾರಿ)। ತೋರಿಸಿ ಕನಿಕರ ಕುಡಿಯಲು ನೀರಿಗೆ ನೀರಿಲ್ಲದ ಕುಗ್ರಾಮದಲಿ। ನೀಡಿರಿ ಬೆಂಬಲ ಬಡಜನ ಬದುಕಲು। ಗೃಹ ಕೈಗಾರಿಕೆ ಕ್ಷೇತ್ರದಲಿ। ನೆಲೆಯನೆ ಕಾಣದ ನಿರ್ಗತಿಕರಿಗೆ। ವಾಸಕೆ ವಸತಿಯ ನೀಡುತಲಿ।।2।। ಕತ್ತಲು ಕವಿದಿಹ ಗ್ರಾಮಗಳೆಲ್ಲವ ಮಿಂಚಿನ ಬೆಳಕಲಿ ಬೆಳಗಿಸಿರಿ। ಕೊಳಚೆ ಕೊಂಪೆಗಳ ಶುಚಿಯಾಗಿರಿಸಲು। ನವನಾಗರಿಕತೆ ಸೂತ್ರವ ಬಳಸಿ।।ಅಬಲೆ ವನಿತೆಯ ಅನಾಥ ಶಿಶುಗಳ ಸಂರಕ್ಷಣೆಗೆ ಶ್ರಮವಹಿಸಿ। ನಾಡಿನ ಮೇಲ್ಮೆಗೆ ಮಿತಸಂತಾನವೆ ಬಾಳಿನ ಭಾಗ್ಯದ ಬೆಳಕೆನ್ನಿ।।3।। ಲಕ್ಷಾಂತರದ ಹಳ್ಳಿಗರನ್ನ ಅಕ್ಷರ ಕ್ರಾಂತಿಗೆ ಗುರಿಪಡಿಸಿ। ಅನಕ್ಷರಸ್ಥರ ಜ್ಞಾನ ವೃದ್ಧಿಗೆ ದಾರಿದೀಪವು ನೀವಾಗಿ। ತೆರಿಗೆ ವಂಚಕರ ಕ್ರೂರ ಶೋಷಕರ ದೋಷ ವಣಿಕರ ದಂಡಿಸುತೆ।। ನಾಡ ಸಂಪದವ ದುಡಿದು ಬೆಳೆಸುತೆ। ಹಾಡಿ ನಮಿಸುತೆ ನಾಡಗೀತೆ।।4।।

# ನಿಂದಾಸ್ತುತಿ

**ಅಕ್ಕಾ ಕೇಳೆ ನಿನ್ನ ತಪಸಿಯರೊಳಗೊಬ್ಬ** **ರಾಗ: ಆನಂದಭೈರವಿ**

ಅಕ್ಕ ಕೇಳೆ ನಿನ್ನ ತಪಸಿಯರೊಳಗೊಬ್ಬ। ಮುಕ್ಕಣ್ಣ ಗೀವರಂತೆ।।ಪ।। ಮೂರ್ಖನೋ ಗಿರಿರಾಜ ವಿಗಡಮುನಿ ಮಾತನೆ। ಲೆಕ್ಕಿಸಿ ಮದುವೆ ಮಾಡಿಕೊಡುವನಂತೆ।।ಅ.ಪ।। ತಲೆ ಎಲ್ಲ ಜಡೆಯಂತೆ ಅದರೊಳಗೆ ಜಲವಂತೆ। ತಿಲಕ ಫಣೆಗೆ ಬಾಲಚಂದ್ರನಂತೆ। ಹೊಳೆವ ಕಿಡಿಗಣ್ಣನಂತೆ ನಂಜುಗೊರಳನಂತೆ। ತಲೆರುಂಡ ಮಾಲೆಯ ಕೊರಳಿಗಾಕಿಹನಂತೆ।।1।। ಉರಗ ಭೂಷಣನಂತೆ ಭಸ್ಮ ಲೇಪನನಂತೆ। ಕರಿಯ ಚರ್ಮಾಂಬರ ಉಡಿಗೆಯಂತೆ। ತಿರಿದುಂಬುವವನಂತೆ ಬಿಳಿಯ ಮೈಯವನಂತೆ। ನಿರುತ ಢಮರುವ ಬಾರಿಸುವ ಜೋಗಿಯಂತೆ।।2।। ಹಡೆದವಳಿಲ್ಲವಂತೆ ಎತ್ತನೇರುವನಂತೆ। ಅಡವಿಗಿರಿಗಳಲ್ಲಿ ಇಪ್ಪನಂತೆ।। ಒಡನೆ ಪುಲಿದೊಗಲದ ಹಾಸಿಗೆ ಇಹುದಂತೆ। ನುಡಿಗೊಮ್ಮೆ ರಾಮಾ ರಾಮಾ ಎಂಬ ಸ್ಮರಣೆಯಂತೆ।।3।। ಮಾರನರಿಪುವಂತೆ ಐದು ಮೋರೆಗಳಂತೆ। ಆರೂ ಇಲ್ಲದ ಪರದೇಶಿಯಂತೆ। ಧಾರುಣಿಯೊಳು ಗುರು ಮಹಿಪತಿ ಸುತಪ್ರಭೋ। ಭವತಾರಕ ಶಿವನೆಂದು। ಮೊರೆ ಹೋಗಬೇಕಂತೆ।।4।।